# ಕನ್ನಡನುಡಿ

ಸಂಪುಟ ೧೫ ಫೆಬ್ರುವರಿ ಸಂಚಿಕೆ ೨

ವಾರ್ಷಿಕ ಚಂದಾ: ಅಂಚೆ ವೆಚ್ಚ ಸೇರಿ ರೂ. ೬

---

ಸಂಪಾದಕರು:

ಎಂ. ಆರ್. ಶ್ರೀನಿವಾಸಮೂರ್ತಿಗಳು



---

ಕನ್ನಡ ಸಾಹಿತ್ಯ ಪರಿಷತ್ತು

ಬೆಂಗಳೂರು

೧೯೫೨

# ವಿಷಯಸೂಚಿಕೆ



**ಮೈಸೂರು ವಿದ್ಯಾಖಾತೆಯವರಿಂದ ಟಿ. ಬಿ. ಸಿ. 15/50-51 (ತಾ|| 24-11-50) ನಿರೂಪದ ಪ್ರಕಾರ 'ಕನ್ನಡ ನುಡಿ' ಯನ್ನು ಸಂಸ್ಥಾನದ ಎಲ್ಲಾ ಹೈಸ್ಕೂಲು, ಮಿಡಲ್ ಸ್ಕೂಲು ಮತ್ತು ಟ್ರೈಯಿನ್ನಿಂಗ್ ಸಂಸ್ಥೆಗಳ ಪುಸ್ತಕ ಭಂಡಾರಗಳಿಗೆ ತರಿಸಿಕೊಳ್ಳಬಹುದೆಂದು ಮಂಜೂರಾಗಿದೆ. ರೂರಲ್ ಡೆವಲಪ್‌ಮೆಂಟ್ ಕಮಿಷನರ್ ಅವರ ನಂ.ಆರ್.ಡಿ.ಆರ್. 7, ಸಿ.2915/50-51 ನೆಯ ಪ್ರಕಾರ "ಕನ್ನಡ ನುಡಿ" ಸಂಸ್ಥಾನದ ಎಲ್ಲಾ ಗ್ರಾಮಪಂಚಾಯಿತಿಗಳಿಗೂ ತರಿಸ ಕೊಳ್ಳಬಹುದೆಂದು ಮಂಜೂರಾಗಿದೆ.**

## ಸನ್ಮಾನ್ಯ ಲೇಖಕರಲ್ಲಿ ಮನವಿ.

ಕನ್ನಡ ಸಾಹಿತ್ಯ ಮತ್ತು ಸೋದರ ಭಾಷಾ ಸಾಹಿತ್ಯಗಳಿಗೆ ಸಂಬಂಧಪಟ್ಟ ವಿವಿಧ ವಿಷಯಗಳನ್ನು ಕುರಿತ ಲೇಖನಗಳನ್ನೂ, ಕಲೆ, ವಿದ್ಯಾಭ್ಯಾಸ, ಪ್ರಾಚೀನ ಮತ್ತು ಆಧುನಿಕ ಸಾಹಿತ್ಯಕ ಗ್ರಂಥಗಳ ಪರಿಚಯ ಲೇಖನಗಳನ್ನೂ ಪ್ರಬಂಧ, ಕಥೆ, ಏಕಾಂಕನಾಟಕ, ಕವಿತೆಗಳನ್ನೂ 'ಕನ್ನಡ ನುಡಿ' ಕೃತಜ್ಞತೆಯಿಂದ ಸ್ವೀಕರಿಸಿ ಉಚಿತ ವರಿತು ಪ್ರಕಟಿಸುತ್ತದೆ. ಸಂಶೋಧನಾತ್ಮಕವಾದ ಪ್ರೌಢ ಲೇಖನಗಳನ್ನು 'ಪರಿಷತ್ಪತ್ರಿಕೆ' ಯಲ್ಲಿ ಪ್ರಕಟಿಸಲಾಗುವುದು.

ಲೇಖಕರು ತಮ್ಮ ಲೇಖನಗಳ ಮೇಲಚ್ಚುಗಳನ್ನು ಬಯಸುವುದಾದರೆ ದಯವಿಟ್ಟು ಮೊದಲೇ ತಿಳಿಸಬೇಕೆಂದು ಕೋರುತ್ತೇವೆ. ನಾಲ್ಕು ಪುಟದ ಅಥವಾ ಅದಕ್ಕೆ ಮಿಕ್ಕ ಲೇಖನಗಳಿಗೆ ಮಾತ್ರ ಹನ್ನೆರಡು ಮೇಲಚ್ಚುಗಳನ್ನು ಕೊಡುವ ಏರ್ಪಾಡನ್ನಿಟ್ಟುಕೊಂಡಿದೆ. ದಯವಿಟ್ಟು ಲೇಖನಗಳನ್ನು ಹಾಲು ಹಾಳೆಯ ಒಂದೇ ಕಡೆ ಶಾಯಿಯಲ್ಲಿ ಸ್ಫುಟವಾಗಿ ಬರೆದು ಕಳಿಸುವ ಉಪಕಾರ ಮಾಡಬೇಕೆಂದು ಪ್ರಾರ್ಥನೆ.

ಸನ್ಮಾನ್ಯ ಲೇಖಕರು 'ಕನ್ನಡ ನುಡಿ' ಗೆ ತಮ್ಮ ಅಮೂಲ್ಯ ಲೇಖನ ದಾನದ ಮೂಲಕ 'ಪರಿಷತ್ತಿನ' ಸಾಹಿತ್ಯಪ್ರಚಾರದ ಧ್ಯೇಯಸಾಧನೆಯಲ್ಲಿ ಸಹಭಾಗಿಗಳಾಗಬೇಕೆಂದು ವಿನಯದಿಂದ ಸಂಪ್ರಾರ್ಥಿಸುತ್ತೇವೆ.

ಸಂಪಾದಕ.



ಶ್ರೀ ಉಮಾಮಹೇಶ್ವರಮೂರ್ತಿ

ಪಂಚಲಿಂಗೇಶ್ವರ ದೇವಾಲಯ, ಬೆಳಗಾವಿ

ಪ್ರಾಚ್ಯ ಸಂಶೋಧನ ಶಾಖೆಯವರ ಕೃಪೆಯಿಂದ




ಸಂಪುಟ ೧೫ | ಫೆಬ್ರವರಿ–೧೯೫೨ | ಸಂಚಿಕೆ ೨



# ಪ್ರಾರ್ಥನೆ

ರಾಗ : ಕೇದಾರಗೌಳ                ತಾಳ : ಅಟತಾಳ

ಮನಸು ನಿಲ್ಲಿಸುವುದು ಬಹಳ ಕಷ್ಟ ‖ ಪ ‖
ಗಣಿಸುವುದು ನಿಮ್ಮೊಳಗೆ ನೀವೆ ಸೆಲೆಬಲ್ಲವರು ‖ ಅ. ಪ ‖

ಮುರಿದೋಡಿ ಬರುವ ರಣರಂಗ ನಿಲ್ಲಿಸಬಹುದು
ಹರಿಯುತಿಹ ನದಿಗಳನು ತಿರುಗಿಸಲಿಬಹುದು
ಕರಿ ಸೊಕ್ಕಿಬರುತಿರಲು ತಡೆದು ನಿಲ್ಲಿಸಬಹುದು
ದುರುಳಮನ ನಿಲಿಸುವುದು ಸುರರಿಗಳವಲ್ಲ ‖೧‖

ಭೈರವನ ದಾಡೆಯನು ಹಿಡಿದು ನಿಲ್ಲಿಸಬಹುದು
ಮಾರುತನ ಉರುಬೆಯನು ನಿಲ್ಲಿಸಬಹುದು
ಮಾರಿಗಳ ಮುಂಜೆರಗ ತುಡುಕಿ ನಿಲ್ಲಿಸಬಹುದು
ಹಾರಿ ಹಾರುವ ಮನಸು ನಿಲಿಸಲಳವಲ್ಲ ‖೨‖

ಶರಧಿಗಳು ಭೋರ್ಗರೆವ ಧ್ವನಿಯ ನಿಲ್ಲಿಸಬಹುದು
ಸುರಿವ ಬಿರುಮಳೆಯನ್ನು ನಿಲ್ಲಿಸಲಿಬಹುದು
ಹರಿದೋಡುವ ಮನಸು ನಿಲಿಸಲಾರಳವಲ್ಲ
ಸಿರಿಯರಸ ವಿಜಯವಿಠ್ಠಲ ತಾನೆ ಬಲ್ಲ ‖೩‖

—ವಿಜಯದಾಸರು

## ಸೂಕ್ತಿ ಸುಧೆ

ಪೊರೆದು ಪೊದಟ್ದ ಧೂಳಿನೆರಸಂಗಭವಂ ನಲಿದಾಡದಂಗಣಂ
ಪೊರಳದ ಸೋಗಿಲುಣ್ಣದ ಕುಚಂ ನಡೆನೋಡದ ವಕ್ತ್ರಮಟ್ಕುಜಿಂ ।
ತೊರೆದೊಡನೆಚ್ಚು ಪಾಯ್ವ ಮೊಲೆವಾಲೊಳಿ ನಾನದ ಮೇಲುದೆಂದುಮೊ
ಪ್ಪಿರದಿನತರ್ಕೆ ಮುನ್ನ ನೆಜಿನೋನದರೀಗಳಟಲ್ದಡಕ್ಕುಮೇ ॥

ಮೊಗಮುಂ ನೋಡುವ ಲಲ್ಲಿಗೆಯ್ವ ಮೊಲೆಯುಂಡಬ್ಬಬ್ಬ ಜಾಜೆಂಬ ಕೆ
ಮ್ಮಗೆ ಕಾಲ್ವತ್ತುವ ದೂರದಿಂ ಪರಿದು ಬಂದಪ್ಪಪ್ಪೆನುತ್ತಪ್ಪುವೊ ।
ಯ್ಯಗೆ ಚೆಯ್ಯಾಡುವ ಮೇಲುದಂ ಮುಸುಕಿಡುತ್ತಾಯೆಂಬ ದಾ-ಯೆಂಬ ಮು
ದ್ದುಗಳಂ ತೋಱುವ ಚಿಣ್ಣನೊಳ್ ನಲಿವ ಪೆಣ್ಣೇಂ ನೋಂಪಿಯಂ
ನೋಂತಳೋ ॥

—ಜಗನ್ನಾಥ ವಿಜಯಂ

## ಸುಭಾಷಿತ

### ಸದ್ಗುರು ಭೋಧೆ

ಜಾಣನನೆಂತುಟಿಗ್ಗನುಮನಂತುಟಿ ಸದ್ಗುರು ತಿರ್ದಿ ಬೋಧಿಪಂ
ಮೇಣೆಸಗಂ ಗಡಂತವರ ಜಾಣ್ಮೆಗೆ ವೃದ್ಧಿಯನಂತೆ ಹಾನಿಯಂ ।
ಕಾಣಿಕುಮಾಡೊಡಂ ಫಲದೆ ಭೇದಮುದಂತುಟಿ ಮಾರ್ನೆಳಲ್ಗಳಂ
ಸಾಣೆಯೋಟ್ಟೆ ವಜ್ರಮೊಳಕೊಳ್ವುದು ಕೊಳ್ವುವೆ ಮಣ್ಣ ಮುದ್ದೆಗಳ್ ॥

### ಲೋಕೋತ್ತರರು

ಕ್ರೂರಂ ಸಿಡಿಲಂತಿರೆ ಸುಕು
ಮಾರಂ ಕಣ್ದೆರೆವ ಕುಸುಮದಂತಿರೆನಿಪ್ಪಾ ।
ಧೀರರ ಲೋಕೋತ್ತರರ ಗ
ಭೀರಮೆನಲ್ ಸಂದಮನಮನಾರರಿದಪರೋ ॥

ಶ್ರೀ ಎಸ್. ಜಿ. ನರಸಿಂಹಾಚಾರ್ಯ
(ಉತ್ತರ ರಾಮಚರಿತ ನಾಟಕ.)






# "ಭಾಷಾವಿಹಾರ"

( ಒಂದು ವಿಮರ್ಶೆ )

ಶ್ರೀ ಡಿ. ಎಲ್. ನರಸಿಂಹಾಚಾರ್, ಎಂ.ಎ. ಮೈಸೂರು.

ಶ್ರೀ ದೇಸಾಯಿ ಪಾಂಡುರಂಗರಾಯರು 'ಕನ್ನಡ ನುಡಿಯು'ಯ ಕಳೆದ ಸಂಚಿಕೆಯಲ್ಲಿ (ನವಂಬರ್ ೫೧) 'ಭಾಷಾವಿಹಾರ'ವೆಂಬ ಲೇಖನವನ್ನು ಬರೆದು ಅದರಲ್ಲಿ 'ಬಾದುಬೆ' ಮುಂತಾದ ಏಳು ಶಬ್ದಗಳ ಅರ್ಥವನ್ನು ನಿರ್ಣಯಿಸಲು ಪ್ರಯತ್ನಿಸಿದ್ದಾರೆ; ಅವುಗಳ ನಿಷ್ಪತ್ತಿಯನ್ನು ಕುರಿತು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಆ ಏಳು ಶಬ್ದಗಳಲ್ಲಿ 'ಒಲ್ಲಣಿಗೆ'ಯೂ ಒಂದಾಗಿದೆ. ಇದರ ಅರ್ಥವಿಚಾರವನ್ನು ಮಾಡುತ್ತ ಹಿಂದೊಮ್ಮೆ ಅದಕ್ಕೆ 'ಉಟ್ಟುಬಿಟ್ಟ ಸೀರೆ' ಎಂಬರ್ಥವೆಂದು ಸಾಧಾರವಾಗಿ ನಿರೂಪಿಸಿ ಅದರ ಮೂಲವನ್ನು ಕುರಿತು "ಇದು ಯಾವ ಭಾಷೆಯದೋ ಕನ್ನಡಕ್ಕೆ ಹೇಗೆ ಬಂತೋ ಇದರ ನಿಷ್ಪತ್ತಿಯೇನೋ ಯಾವುದನ್ನೂ ಸದ್ಯದಲ್ಲಿ ವಿವರಿಸಲು ಅವಕಾಶವಿಲ್ಲ" ಎಂದು ಬರೆದಿದ್ದೆ.[೧] ಇದನ್ನು ಕುರಿತು ಟೀಕಿಸುತ್ತ ಶ್ರೀ ದೇಸಾಯಿ ಪಾಂಡುರಂಗರಾಯರು "ಈ ಅಭಿಪ್ರಾಯವು ಸಮರ್ಥನೀಯವಾಗಿಲ್ಲ. ವಿಮರ್ಶಾಪೂರ್ವಕ ನೋಡಿದರೆ ಈ ಶಬ್ದವು ಇಂದಿನ ಕನ್ನಡಕ್ಕೆ ದೂರವಾಗಿಲ್ಲ. ಇದು ಶುದ್ಧ ಕನ್ನಡ ಪದ" ಎಂದು ತೀರ್ಮಾನಿಸಿ, ಒಲ್ಲಿ + ಅಣಿಗೆ ಎಂಬೆರಡು ಶಬ್ದಗಳ ಸೇರುವಣೆಯಿಂದ 'ಒಲ್ಲಣಿಗೆ' ಬಂದಿದೆಯೆಂದು ಪ್ರತಿಪಾದಿಸಿದ್ದಾರೆ. ಈ ಅಭಿಪ್ರಾಯವನ್ನೂ ಪ್ರಾಸಂಗಿಕವಾಗಿ ಅವರೇ ಹೇಳಿರುವ ಮತ್ತೆ ಕೆಲವನ್ನೂ ಇಲ್ಲಿ ವಿಮರ್ಶಿಸಲು ತೊಡಗಿದೆ. ಈ ವಿಷಯವನ್ನು ಪುನಃ ಹಿಕ್ಕಿ ನೋಡುವ ಅವಕಾಶವನ್ನು ಕಲ್ಪಿಸಿ ಕೊಟ್ಟಿರುವ ಶ್ರೀ ದೇಸಾಯಿಯವರಿಗೆ ನನ್ನ ಕೃತಜ್ಞತೆಗಳು.

ಮೇಲ್ಕಂಡ ನನ್ನ ಲೇಖನದಲ್ಲಿ ಹೇಳಿರುವ ಆ ಮಾತುಗಳಲ್ಲಿ ಯಾವ ಬಗೆಯಾದ ಧೋರಣೆಯೂ ಇಲ್ಲ; ಅದು ನನ್ನ ಮಟ್ಟಿಗೆ ವಾಸ್ತವವಾಗಿರುವುದನ್ನೇ ಹೇಳುತ್ತಿದೆ. ಆ ಶಬ್ದ ಹೇಗೆ ರೂಪುಗೊಂಡಿದೆಯೆಂಬ ಅಂಶದಲ್ಲಿ ನನಗೆ ಇದ್ದ ಸಂದೇಹವನ್ನೂ ಅನಿಶ್ಚಿತತೆಯನ್ನೂ ಆ ನನ್ನ ಮಾತು ಪ್ರತಿಬಿಂಬಿಸುತ್ತದೆ; ಅಲ್ಲದೆ ಸ್ವಲ್ಪ ಮಟ್ಟಿಗೆ ಆ ವಿಚಾರದಲ್ಲಿ ಮುಂದುವರಿದು ನನ್ನ ಮನಸ್ಸಿಗೆ ತೃಪ್ತಿಕರವಾಗಿ ಆ ಸಮಸ್ಯೆಯನ್ನು ಬಿಡಿಸಲಾಗದಿದ್ದುದೂ ಅದರಿಂದ ವ್ಯಕ್ತವಾಗಿದೆ. ಶ್ರೀ ಪಾಂಡುರಂಗರಾಯರ ಲೇಖನ ಏನಾದರೂ ಹೊಸ ಬೆಳಕನ್ನು ಕಾಣಿಸಬಲ್ಲುದೋ ಎಂಬ ಕುತೂಹಲದಿಂದ ಪ್ರೇರಿತನಾಗಿ ಅವರ ಲೇಖನವನ್ನು ಆಸಕ್ತಿಯಿಂದ ನೋಡಿದೆ. ಸಮಸ್ಯೆ ಬಿಡುವ ಬದಲು ಹೆಚ್ಚು ತೊಡಕಾಗಿ ಪರಿಣಮಿಸಿದೆ. 'ಇದು ಶುದ್ಧ ಕನ್ನಡ ಪದ' ಎಂದು ಶ್ರೀ ದೇಸಾಯಿಯವರ ಅಭಿಪ್ರಾಯವಾಗಿದೆಯಷ್ಟೆ; 'ವಿಮರ್ಶಾಪೂರ್ವಕವಾಗಿ ನೋಡಿದರೆ" ಎಂಬ ಅವರ ಮಾತುಗಳಲ್ಲಿ ಅಡಗಿರುವ ಆ ವಿಮರ್ಶೆ ಮಾನಸಿಕವಾಗಿಯೇ ಇರದೆ ಕೊಂಚ ಚಾಕ್ಷುಷವಾಗಿ ಪರಿಣಮಿಸಿದ್ದರೆ ಚೆನ್ನಾಗಿತ್ತು. ಒಂದು ಪದ ಶುದ್ಧಕನ್ನಡವೇ ಅಲ್ಲವೇ ಎಂಬುದನ್ನು ನಿರ್ಣಯಿಸುವ ಮುನ್ನ ಈ ಕೆಳಗಿನ ಅಂಶಗಳನ್ನು ಗಮನಿಸಬೇಕು:

೧. ಅದು ಕನ್ನಡವೇ ಆಗಿದ್ದರೆ ಯಾವ ಧಾತು ಮೂಲದಿಂದ ಬಂದಿರಬಹುದೆಂಬುದನ್ನು ಕಂಡುಹಿಡಿಯಬೇಕು; ಅದೇ ಧಾತುವಿನಿಂದ ಹುಟ್ಟಿರುವ ಬೇರೆ ಶಬ್ದಗಳೇನಾದರೂ ಇದ್ದರೆ ಅವನ್ನು ಕಾಣಿಸಬೇಕು.

೨. ಕನ್ನಡದಲ್ಲಿ ಆ ಧಾತುವಿಲ್ಲದಿದ್ದರೆ ಇತರ ದ್ರಾವಿಡ ಭಾಷೆಗಳಲ್ಲಿ ಅದಿರಬಹುದು; ಅದರಿಂದ ಜನ್ಯವಾದ ಇತರ ಶಬ್ದಗಳೂ ಇರಬಹುದು; ಇವನ್ನು ತೋರಿಸಬೇಕು.

೩. ಒಂದು ಶಬ್ದ ಸಂಸ್ಕೃತದಲ್ಲಿ ಏಕಾಕಿಯಾಗಿದ್ದು ಅದರ ನಿಷ್ಪತ್ತಿ ಸಂದೇಹಗ್ರಸ್ತವೆಂದು ಕಂಡುಬಂದಾಗ, ಕನ್ನಡ ಮುಂತಾದ ದ್ರಾವಿಡ ಭಾಷೆಗಳಲ್ಲಿ ಆ ಶಬ್ದಮೂಲವೂ ಅದರಿಂದ ಕವಲೊಡೆದು ಬಂದಿರುವ ಶಬ್ದ ಸಮುದಾಯವೂ ಇದ್ದಾಗ, ಅದು ದ್ರಾವಿಡ(ಕನ್ನಡ) ಶಬ್ದವೆಂದು ತೀರ್ಮಾನಿಸಬಹುದು.

---

೧ ಸಂಭಾವನೆ ಪು. ೨೨೨-೨೨೪.

೪. ಯಾವುದಾದರೂ ವಸ್ತುವನ್ನೋ ಭಾವವನ್ನೋ ಹೇಳುವ ಶಬ್ದವೊಂದು ದ್ರಾವಿಡ ಭಾಷೆಗಳಲ್ಲಿ ಏಕಮಾತ್ರವೇ ಆಗಿದ್ದು ಸಂಸ್ಕೃತದಲ್ಲಿ ಸಮಾನಾರ್ಥಕವಾದ ಹಲವು ಶಬ್ದಗಳಿದ್ದರೆ ಆಗ ಆ ಶಬ್ದ ದ್ರಾವಿಡವಾಗಿರಬಹುದು.

೫. ಸಂಸ್ಕೃತದ ಒಡಹುಟ್ಟುಗಳಾದ ಇಂಡೋ-ಯುರೋಪಿಯನ್ ಭಾಷೆಗಳಲ್ಲಿ ಒಂದು ಶಬ್ದಕ್ಕೆ ಸಂವಾದಿ ಶಬ್ದಗಳಿಲ್ಲದಿದ್ದು ಎಲ್ಲ ದ್ರಾವಿಡ ಭಾಷೆಗಳಲ್ಲೂ ಆ ಶಬ್ದವಿದ್ದರೆ ಆಗ ಅದು ದ್ರಾವಿಡವೇ ಇರಬಹುದು.೨

ಮೇಲ್ಕಂಡ ಅಂಶಗಳಲ್ಲಿ ಒಂದೋ ಹಲವೋ ಖಚಿತವಾಗಿ ನಿರ್ಣೀತವಾದರೆ ಆಗ ಆ ಶಬ್ದ ದ್ರಾವಿಡವೋ ದ್ರಾವಿಡೇತರವೋ ಎಂಬುದನ್ನು ಸ್ಥಾಪಿಸಬಹುದು. ಪ್ರಕೃತ ಶಬ್ದದ ವಿಚಾರದಲ್ಲಿ ಶ್ರೀ ದೇಸಾಯಿಯವರು ಇವನ್ನೆಲ್ಲ ಗಮನಿಸಿದ್ದಾರೋ ಇಲ್ಲವೋ ಎಂಬಂಶ ಅವರ ಲೇಖನದಿಂದ ತಿಳಿದುಬರುವುದಿಲ್ಲ. 'ಇದು ಶುದ್ಧ ಕನ್ನಡ ಪದ' ಎಂಬ ಹೇಳಿಕೆಯಷ್ಟೇ ಸಮರ್ಥವಾಗದು. ಅದು ಅವಿಚಾರಿತ ಅಭಿಪ್ರಾಯವೇ ಹೊರತು ಸಪ್ರಮಾಣ ಸಿದ್ಧಾಂತವಾಗುವುದಿಲ್ಲ. ಶಬ್ದನಿಷ್ಪತ್ತಿ ಯಾರ ಇಚ್ಛೆಗೂ ಅನುಸಾರವಾಗಿ ಇರುವ ವಿಷಯವಲ್ಲ.

### ೧. ಒಲ್ಲಣಿಗೆ

'ಒಲ್ಲಣಿಗೆ'ಯಲ್ಲಿ ೧ ಒಲ್ಲಿ + ೨ ಅಣಿಗೆ ಎಂಬೆರಡು ಶಬ್ದಗಳು ಕೂಡಿವೆಯೆಂಬ ಅಭಿಪ್ರಾಯವನ್ನು ಪರೀಕ್ಷಿಸಬೇಕು. 'ಒಲ್ಲಿ' ಎಂಬ ಪದವನ್ನು ಮೊದಲು ಎತ್ತಿಕೊಳ್ಳಬಹುದು. ಈ ಶಬ್ದವನ್ನು ಕಿಟ್ಟೆಲ್ ಅವರು ತಮ್ಮ ಕೋಶದಲ್ಲಿ ಕಾರಕ್ಷರಗಳಿಂದ ಮುದ್ರಿಸಿ ಅದು ದೇಶ್ಯವೆಂಬ ಅಭಿಪ್ರಾಯವನ್ನು ಸೂಚಿಸಿರುವುದೇ ಅಲ್ಲದೆ 'ಮಂಗರಾಜ ನಿಘಂಟು'ವಿನಲ್ಲಿ ಅದು ದೊರೆಯುತ್ತದೆಂದೂ ತುಳು ತೆಲುಗು ಮಲಯಾಳ ಭಾಷೆಗಳಲ್ಲಿ 'ಒಲ್ಲೆ', 'ವಲ್ಲೆ' ಎಂಬ ಅದೇ ಶಬ್ದದ ಬೇರೆ ರೂಪಗಳಿವೆಯೆಂದೂ ಹೇಳಿದ್ದಾರೆ. ಅದರ ಅರ್ಥ ಸಣ್ಣದೋತ್ರ; ಉತ್ತರೀಯವೂ ಹೊದೆಯುವ ವಸ್ತ್ರವೂ ಆಗಬಹುದು. ಈ ಶಬ್ದ ತಮಿಳು ಕೋಶದಲ್ಲಿ (Tamil Lexicon) ಇರುವಂತೆ ಕಾಣುವುದಿಲ್ಲ; ತೆಲುಗಿನಲ್ಲಿ 'ಒಲ್ಲಿಯು', 'ಒಲ್ಲೆ' ಎಂಬೆರಡು ರೂಪಗಳಿದ್ದು ವಸ್ತ್ರ, ಬಟ್ಟೆ, ಚೀರ ಎಂಬರ್ಥವನ್ನು ಹೊಂದಿದೆ; ಮಲಯಾಳದಲ್ಲಿ 'ಒಲ್ಲಿ' ಶಬ್ದವಿದ್ದು ಅದಕ್ಕೆ ಹೊದಿಕೆ ಎಂಬರ್ಥವಿದೆ. ಈ ಶಬ್ದ ದೇಶ್ಯವೆಂಬ ಕಿಟ್ಟೆಲ್ ಅವರ ಅಭಿಪ್ರಾಯವನ್ನೂ ಪರಿಶೀಲಿಸಬೇಕು. ಈ ಶಬ್ದದ ಮೂಲವೇನು, ಅದರಿಂದಲೇ ಇನ್ನಾವುದಾದರೂ ಶಬ್ದ ಬಂದಿದೆಯೆ ಎಂಬೆರಡು ಪ್ರಶ್ನೆಗಳೇಳುತ್ತವೆ. ಇದಕ್ಕೆ ಉತ್ತರ ಈಗ ತಿಳಿದ ಮಟ್ಟಿಗೆ ಶಬ್ದಮೂಲ ಗೊತ್ತಿಲ್ಲ, ಬೇರೆ ದೇಶ್ಯ ಶಬ್ದಗಳಿಲ್ಲ ಎಂದಿಷ್ಟೇ. ಹಳಗನ್ನಡ ಕಾವ್ಯಗಳಲ್ಲಿ ಈ ಶಬ್ದದ ಪ್ರಯೋಗವಿರುವಂತೆ ಕಾಣುವುದಿಲ್ಲ; ಅದ್ದರಿಂದ ಇದು ಕನ್ನಡಕ್ಕೆ ಎಷ್ಟು ಹಳೆಯದೆಂಬುದನ್ನು ಹೇಳಲಾಗದು. 'ಮಂಗರಾಜ ನಿಘಂಟು'ವಿನ ಕಾಲಕ್ಕೆ ಎಂದರೆ ಕ್ರಿ. ಶ. ೧೪೦೦ರ ಸುಮಾರಿಗೆ ಇದು ಸಾಹಿತ್ಯದೊಳಕ್ಕೆ ಪ್ರವೇಶಿಸಿರಬಹುದು. 'ವಲ್ಲೆ' ಎಂಬ ಬೇರೊಂದು ರೂಪವನ್ನು ಕಿಟ್ಟೆಲ್ ಅವರು ಸೂಚಿಸಿರುವುದು ಗಮನಾರ್ಹವಾಗಿದೆ. ಮಾನಿಯರ್ ವಿಲಿಯಂಸ್ ಅವರು ತಮ್ಮ ಸಂಸ್ಕೃತ- ಇಂಗ್ಲಿಷ್ ಕೋಶದಲ್ಲಿ 'ವಲ್ಲೀ ಪದ' ಎಂಬ ಶಬ್ದವನ್ನುಲ್ಲೇಖಿಸಿ ಅದಕ್ಕೆ "A kind of cloth with various markings or patterns" ಎಂದು ಅರ್ಥ ಹೇಳಿದ್ದಾರೆ. 'ಪಾಣೀ' ಎಂಬೊಂದು ಪ್ರಾಕೃತಶಬ್ದಕ್ಕೆ 'ವಲ್ಲೀ ವಿಶೇಷಃ' ಎಂಬ ಅರ್ಥವೂ "ಪಾಣೀ ಸಾಮಾವಲ್ಲೀ ಗುಂಜಾವಲ್ಲೀಯ ವತ್ಥಾಣಿ" ಎಂಬ 'ಪಣ್ಣವಣಾಸುತ್ತ'ವೆಂಬ ಜೈನ ಗ್ರಂಥದ ಪ್ರಯೋಗವೂ 'ಪಾಇಯ ಸದ್ದ ಮಹಣ್ಣವ'ವೆಂಬ ಕೋಶದಲ್ಲಿ ದೊರೆಯುತ್ತವೆ. ಸಾಮಾವಲ್ಲೀ ಎಂದರೆ ಶ್ಯಾಮಾವಲ್ಲೀ (ಶ್ಯಾಮವರ್ಣದ ಬಟ್ಟೆ) ಎಂದರ್ಥ. ಅದ್ದರಿಂದ 'ವಲ್ಲೀ' ಎಂಬ ಪದಕ್ಕೆ ವಸ್ತ್ರವೆಂಬ ಅರ್ಥ ಸ್ಥಾಪಿತವಾಗುವುದೇ ಅಲ್ಲದೆ ಅದು ದ್ರಾವಿಡೇತರವಾಗಿರಬಹುದೆಂಬ ಸೂಚನೆಯೂ ದೊರೆಯುತ್ತದೆ. ವಲ್, ವಲ್ಲ್ ಎಂಬ ಸಂಸ್ಕೃತ ಧಾತುವಿನಿಂದ ಈ ಶಬ್ದ ಮೂಡಿ ಬಂದಿರುವ ಹಾಗೆ ಕಾಣುತ್ತದೆ. ಸಂವರಣೇ, ಸಂಚರಣೇ ಎಂದು ಆ ಧಾತುವಿಗೆ ಅರ್ಥ; ಹೊದೆ, ಮುಚ್ಚು ಮುಂತಾದ ಅಭಿಪ್ರಾಯವನ್ನೂ ಕೊಡಲು ಸಮರ್ಥವಾಗಿವೆ; ವಲಯ, ವಲಿತ, ಮುಂತಾದ ಅನೇಕ ಶಬ್ದಗಳು ಅದರಿಂದ ಜನಿಸಿವೆ. ತಮಿಳಿನಲ್ಲಿ 'ವಲ್ಲಿಕ್ಕಯಿಱು' ಎಂಬ ಶಬ್ದಕ್ಕೆ "waist-cord worn over the cloth" ಎಂಬರ್ಥವುಂಟು; ವಲ್ಲಿ + ಕಯಿಱು ಎಂದು ಅದರ ವಿಭಾಗ; ಕಯಿಱು

---

೨ Caldwell: Comparative Grammar of Dr. Languages (p. 566-67).

ಎಂದರೆ ಹಗ್ಗ, ನೇಣು. 'ಉಡ್ಯೆಮೇಲ್ ತರಿಕ್ಕುಂ' ಎಂಬ ಮಾತಿನಿಂದ ವಲ್ಲಿ ಎಂದರೆ ಉಡೈ = ಉಡುಪು ಎಂಬರ್ಥ ಸ್ಫುರಿಸುತ್ತದೆ. ಈ ಕಾರಣಗಳಿಂದ ಶಬ್ದದ ಮೂಲರೂಪ ಒಲ್ಲಿ ಅಲ್ಲ, ವಲ್ಲೀ ಎಂದು ಹೇಳಬಹುದು; ಅದು ಸಂಸ್ಕೃತದ ಶಬ್ದವಾಗಿ ಕಾಣುವುದೇ ಹೊರತು, ಕನ್ನಡವಲ್ಲ. ಅದು ದ್ರಾವಿಡ ಭಾಷೆಗಳ ಸ್ವಂತ ಆಸ್ತಿಯಲ್ಲ.

'ಒಲ್ಲಣಿಗೆ'ಯ ಪ್ರಥಮ ಪದ 'ಒಲ್ಲ' ಎಂದಿರಬೇಕೆಂದು ಹೇಳಲು ಆಧಾರಗಳು ಹೇರಳವಾಗಿವೆ. ಸಂಸ್ಕೃತದಆರ್ದ್ರ ಎಂಬ ಪದ—ಇದಕ್ಕೆ ಗ್ರೀಕಿನಲ್ಲಿ ಸಹೋದರಶಬ್ದವುಂಟು – ಭಾರತೀಯ ಭಾಷೆಗಳಲ್ಲಿ ನಾನಾ ಆಕಾರಗಳನ್ನು ತಾಳಿಕೊಂಡಿದೆ; (೧) ಕನ್ನಡದಲ್ಲಿ ಅದಕ್ಕೆ 'ಒದ್ದೆ' ಎಂದಾಗಿದೆ. ಕಿಟ್ಟೆಲ್ಲರು ಇದನ್ನು ಅಚ್ಚಗನ್ನಡವೆಂದು ಭ್ರಮಿಸಿದ್ದಾರೆ. (೨) ಕೆಲವು ಪ್ರಾಕೃತ ಭಾಷೆಗಳಲ್ಲಿ 'ಅದ್ದ' ಎಂದಾಗುತ್ತದೆ; ಆರ್ದ್ರಿತ > ಅದ್ದಿಯ (೩) ಇದಕ್ಕೆ 'ಅಲ್ಲ' ಎಂಬ ರೂಪವೂ ಪ್ರಾಕೃತದಲ್ಲಿ ಉಂಟಾಗಿ ಅದು ದ್ರಾವಿಡ ಭಾಷೆಗಳಿಗೂ ಬಂದಿದೆ. ಪಾಲಿ, ಅರ್ಧಮಾಗಧಿ ಮುಂತಾದ ಭಾಷೆಗಳಲ್ಲಿ ಈ ಕೆಳಗಿನ ಶಬ್ದಗಳು ದೊರೆಯುತ್ತವೆ:

| | |
|---|---|
| ಅಲ್ಲಮತ್ತಿಕಾಪುಂಜ | (ಅರ್ಥ. ಒದ್ದೆಯಾದ ಮಣ್ಣು ಮುದ್ದೆ) |
| ಅಲ್ಲಕುಸಮುಟ್ಠಿ | (ಹೊಸದಾಗಿ ಕಿತ್ತ ಹಸಿಹಲ್ಲು) |
| ಅಲ್ಲಗೋಮಯ | (ಹಸಿಸಗಣಿ) |
| ಅಲ್ಲಚಮ್ಮ | (ಹಸಿ ಚರ್ಮ) |
| ಅಲ್ಲದಾರೂನಿ | (ಹಸಿ ಕಡ್ಡಿ) |
| ಅಲ್ಲಕೇಶ | (ಒದ್ದೆಯಾದ, ತೊಳೆದ, ನಿರ್ಮಲಕೇಶ) |
| ಅಲ್ಲವತ್ಥ | (ತೊಳೆದಬಟ್ಟೆ) |
| ಅಲ್ಲಗ (ಕ) | (ಆರ್ದ್ರಕ: ಹಸಿಶುಂಠಿ) |
| ಅಲ್ಲ | (ಆರ್ದ್ರ; ,, ) |
| ಅಲ್ಲಚೀವರ | (ಒದ್ದೆಬಟ್ಟೆ) |

ಸಮಾಸದ ಪೂರ್ವಪದವಾಗಿದ್ದಾಗಲೂ ಸ್ವತಂತ್ರವಾಗಿದ್ದಾಗಲೂ ಆರ್ದ್ರಶಬ್ದ ಪ್ರಾಕೃತದಲ್ಲಿ'ಅಲ್ಲ'ವಾಗುವುದು ಮೇಲಿನ ಉದಾಹರಣೆಗಳಿಂದ ಸ್ಪಷ್ಟಪಡುತ್ತದೆ. 'ಅಲ್ಲ' ಎಂಬುದು ನಮ್ಮ ವಿಶೇಷ ಗಮನಕ್ಕೆ ಅರ್ಹ; ಹಸಿಶುಂಠಿ ಎಂಬರ್ಥದಲ್ಲಿ ಅದು ಕನ್ನಡದಲ್ಲಿ ಅಲ್ಲ ಎಂದೂ ತಮಿಳಿನಲ್ಲಿ ಅಲ್ಲಂ ಎಂದೂ ತೆಲುಗಿನಲ್ಲಿ ಅಲ್ಲಮು ಎಂದೂ ಪ್ರಾಚೀನ ಕವಿ ಪ್ರಯೋಗದಲ್ಲೂ ಇಂದಿನ ಬಳಕೆಯಲ್ಲೂ ನೆಲಸಿ ನಿಂತಿದೆ. ಇದು ಶುದ್ಧ ದೇಶ್ಯವೆಂದು ಕಿಟ್ಟೆಲ್ಲರು ಭ್ರಾಂತಿಗೊಂಡು ಅದನ್ನು ಕಪ್ಪಕ್ಷರಗಳಲ್ಲಿ ಅಚ್ಚಿಟ್ಟಿದ್ದಾರೆ (೪) 'ಉಲ್ಲ' ಎಂಬ ಮತ್ತೊಂದು ರೂಪವೂ ಪ್ರಾಕೃತದಲ್ಲಿ ಆರ್ದ್ರಕ್ಕೆ ಉಂಟು. ಉಲ್ಲವಿ, ಉಲ್ಲಣ < ಆರ್ದ್ರೀಕರಣ ಉಲ್ಲಣಿಯಾ < ಆರ್ದ್ರಾಯಣಿಕಾ ಎಂಬಿತ್ಯಾದಿ ಶಬ್ದಗಳು ಪ್ರಾಕೃತಕೋಶಗಳಲ್ಲಿ ದೊರೆಯುತ್ತವೆ; ಅರ್ಧಮಾಗಧಿ ಭಾಷೆಯಲ್ಲಿ ಉಲ್ಲಣ, ಉಲ್ಲಣಿಯಾ ಎಂಬ ಪದಗಳಿವೆ. (೫) 'ಒಲ್ಲ' ಎಂಬ ಇನ್ನೊಂದು ರೂಪಾಂತರವೂ ಉಂಟಾಗಿದೆ: ಒಲ್ಲ < ಆರ್ದ್ರ. ಹಾಲರಾಜನ ಗಾಥಾಸಪ್ತಶತಿ, ರಾವಣವಹ, ಸೇತುಬಂಧ, ಕರ್ಪೂರಮಂಜರಿ ಮುಂತಾದ ಗ್ರಂಥಗಳಲ್ಲಿ ಇದರ ಪ್ರಯೋಗವಿದೆಯೆಂದು ಪಿಷಲ್ ಅವರು ಹೇಳಿದ್ದಾರೆ[3] 'ಅನಾರ್ದ್ರ'ವು ಅಣೊಲ್ಲವಾಗಿದೆ; ಪ್ರೇಮಾರ್ದ್ರವೆಂಬುದರಿಂದ 'ಪ್ರೇಮೊಲ್ಲ' ವಾಗಿದೆ. ಆರ್ದ್ರಿತವೆಂಬುದರಿಂದ ಒಲ್ಲಿಯ ರೂಪುಗೊಂಡಿದೆ. ಮರಾಠಿ ಭಾಷೆಯಲ್ಲಿ ಓಲ್ಹಾವಣೇ < ಆರ್ದ್ರಯಣ (?), ಓಲಾಣೀ < ಅವಲಂಬಿನೀ (?) = ವಸ್ತ್ರ, ಓಲಾಣೀ (ಸ್ನಾನವೇಳೆಯಲ್ಲಿ ಉಪಯೋಗಿಸುವ ವಸ್ತ್ರ) < ಆರ್ದ್ರಯಣ (?), ಓಲೇಟೀಂ (ತೇಂ) ಮುಂತಾದ ಶಬ್ದಗಳು ಕಾಣುತ್ತವೆ.[4] ಆದ್ದರಿಂದ ಒಲ್ಲ, ಓಲ ಎಂಬೆರಡು ರೂಪಾಂತರಗಳೂ ಆರ್ದ್ರಶಬ್ದಕ್ಕಿವೆಯೆಂಬುದು ವಿಶದವಾಗಿದೆ. ಪ್ರಕೃತ 'ಒಲ್ಲಣಿಗೆ' ಎಂಬಲ್ಲಿನ 'ಒಲ್ಲ' 'ಆರ್ದ್ರದ' ಪ್ರಾಕೃತ ರೂಪಾಂತರವಾಗಿದ್ದು ಪ್ರಾಕೃತಭಾಷೆಗಳಮೂಲಕ ಕನ್ನಡಕ್ಕೆ ಬಂದಿದೆ ಎಂಬುದರಲ್ಲಿ ಸಂದೇಹಪಡಲು ಕಾರಣವಿಲ್ಲ.

ಇನ್ನು ಅಣಿಗೆ ಯೆಂಬ ಎರಡನೆಯ ಶಬ್ದ. ಇದನ್ನು ಕುರಿತು ಶ್ರೀ ದೇಸಾಯಿಯವರು "ಅಣಿಗೆ ಅಣಿ ಎಂಬ ಮೂಲದಿಂದ ಬಂದಿದೆ. ಅಣಿಗೊಳಿಸಿದುದು ಅಣಿಗೆ. ಅಣಿಗೆಯಲ್ಲಿ ಅಂದ, ಅನುರೂಪ, ಜೋಡಣೆ ಮುಂತಾದ ಅರ್ಥಗಳು ಅಡಕವಾಗಿವೆ. ಅಣಿಗೆಯಿಂದ ಅಣಿಗೊಂಡ ಅನೇಕ ಪದಗಳು ಕನ್ನಡದಲ್ಲಿವೆ. ಅಣಿಗೆಯೇ ಹಣಿಗೆ ಆಗಿದೆ. ಅಣಿಗೆಯ ಅಸ್ತಿತ್ವವನ್ನು: ಮೆರವಣಿಗೆ, ಬಾಚಣಿಕೆ, ಬೀಸಣಿಕೆ, ಕೊಲ್ಲಣಿಗೆ, ಅಡ್ಡಣಿಗೆ ಮುಂತಾದ ಪದಗಳಲ್ಲಿ ಕಂಡು ಹಿಡಿಯಬಹುದು" ಎಂದು ಮುಂತಾಗಿ ಬರೆದಿದ್ದಾರೆ. ಈ ಅಭಿಪ್ರಾಯಗಳನ್ನೆಲ್ಲ ಸತ್ಯಾನ್ವೇಷಣ ದೃಷ್ಟಿಯಿಂದ ಸೂಕ್ಷ್ಮವಾಗಿ ವಿಮರ್ಶಿಸುವುದು ಆವಶ್ಯಕ. ಅಣಿಗೆಯು ಅಣಿಯಿಂದ ಬಂದಿದ್ದರೆ 'ಗೆ' ಎಂಬುದು ಪ್ರತ್ಯಯವಾಗಬೇಕು; ಪಣ್ಣಿಗೆ,

---

3. Pischel: Grammatik der Prakrit-Sprachen; Section 111.

4. "ಮಹಾರಾಷ್ಟ್ರ ಶಬ್ದಕೋಶ"ವನ್ನು ನೋಡಿ: ಪ್ರಶ್ನ ಚಿಹ್ನಗಳು ನನ್ನವು; ಸಂದೇಹಸೂಚಕವಾಗಿವೆ.

ಬರ್ದುಗೆ, ಉಡುಗೆ, ಅಡುಗೆ ಮುಂತಾದುವುಗಳಲ್ಲಿರುವ 'ಗೆ' ಎಂಬುದು ಕೃತ್ಪ್ರತ್ಯಯ; 'ಗೆ' ಎಂಬ ತದ್ಧಿತ ಪ್ರತ್ಯಯವಿರುವಂತೆ ಕಂಡುಬಂದಿಲ್ಲ. ಆದ್ದರಿಂದ ಅಣಿ ಕ್ರಿಯಾರ್ಥಕ ಧಾತುವಾಗಿರಬೇಕು. ಕೇಶಿರಾಜನ ಧಾತುಪಾಠದಲ್ಲಿ ಅಣೆ ಎಂಬ ಎಕಾರಾಂತ ಧಾತುವಿದೆಯೇ ಹೊರತು ಅಣಿ ಎಂದು ಇಕಾರಾಂತವುಳ್ಳದ್ದು ಇಲ್ಲ; ಅಣಿದಂ, ಅಣಿದಪಂ, ಅಣಿವಂ ಮುಂತಾದ ಕ್ರಿಯಾಪದಗಳೂ, ಅಣಿದು ಮೊದಲಾದ ಕೃದಂತ ರೂಪಗಳೂ ಸಾಹಿತ್ಯದಲ್ಲಿ ಪ್ರಯೋಗವಾಗಿರುವಂತೆ ಶ್ರೀ ದೇಸಾಯಿಯವರು ತಿಳಿಸಿಲ್ಲ. ಅಣಿಧಾತುವಿನ ಅಸ್ತಿತ್ವಕ್ಕೆ ಅವರು ಪ್ರಮಾಣಗಳನ್ನು ಒದಗಿಸಿಲ್ಲ; ಇರಲಿ. ಅಣ್ ಎಂಬ ಧಾತುವುಂಟು; ಅಣೆ ಉಂಟು; ಅಣಿ ಎಂಬುದೂ ಇದೆ, ಕನ್ನಡದಲ್ಲಿ; "ಇಂದಣ್ಮೆ ಸಾಯಲ್ಕಣಿದೆಂ" ಎಂದು ನೇಮಿಚಂದ್ರನ ಪ್ರಯೋಗ.[5] ತಮಿಳಿನಲ್ಲಿ ಅಣಿ ಎಂಬ ಅಕರ್ಮಕಧಾತುವೊಂದಿದ್ದು ಅದಕ್ಕೆ ಸೊಗಸಾಗು ಭೂಷಣವಾಗು, ಅಲಂಕಾರವಾಗು, ಸಾಲಾಗು ಇವೇ ಮುಂತಾದ ಅರ್ಥಗಳಿವೆ. ಇದೇ ಅಕರ್ಮಕ ಧಾತು ಕನ್ನಡದಲ್ಲಿಯೂ ಇದ್ದಿತೆಂದು ಹೇಳುವುದಕ್ಕೆ ಅಣಿಗೆಯನ್ನೂ, ನೇಮಿಚಂದ್ರನ ಅಣಿದೆಂ ಎಂಬುದನ್ನೂ ಬಿಟ್ಟು ಬೇರೆ ಆಧಾರವಿಲ್ಲ. ಅಣಿಗೆ ಎಂಬುದು ಸೊಗಸು ಸಾಲು, ವರ್ಣನೆ, ಒಡವೆ, ಅಲಂಕಾರ ಮುಂತಾದ ಅರ್ಥವನ್ನು ಪಡೆದು ತಮಿಳಿನ ಅಣಿಕಮ್ ಎಂಬುದಕ್ಕೆ ಸಮಾನವಾಗಿದೆ. ಆದ್ದರಿಂದ ಒಲ್ಲಿ+ಅಣಿಗೆ ಎಂಬುದಕ್ಕೆ ಒಲ್ಲಿಯ (= ಉತ್ತರೀಯದ) ಸೊಗಸು, ಅಲಂಕಾರ ಇತ್ಯಾದಿ ಅರ್ಥಗಳು ಏರ್ಪಡುತ್ತವೆ.

'ಒಲ್ಲಣಿಗೆಯನುಡಿಸಿ', 'ಒಲ್ಲಣಿಗೆಯಂ ಪಿಟಿವಂತೆ' ಎಂಬ ಕವಿಪ್ರಯೋಗಗಳಿಗೆ ಉತ್ತರೀಯದ ಸೊಗಸನ್ನು ಉಡಿಸಿ, ಒಲ್ಲಿಯ ಸೊಗಸನ್ನು ಹಿಂಡುವಂತೆ ಎಂದು ಅರ್ಥವಿಸಬೇಕಾಗುತ್ತದೆ. ಒಲ್ಲಿಯನ್ನು ಉಡಬಹುದು, ಉಡಿಸಬಹುದು, ಹಿಂಡಬಹುದು; ಅದರ ಸೊಗಸನ್ನು ಹೇಗೆ ಉಡಿಸುವುದು, ಹಿಂಡುವುದು ? ಹೀಗೆ ಅರ್ಥ ಮಾಡುವುದು ಪರಿಹಾಸಕ್ಕೆ ಆಸ್ಪದವಾಗುತ್ತದೆ. ಆದ್ದರಿಂದ ಇಲ್ಲಿ ಕಾಣುವ ಅಣಿಗೆಯೆಂಬ ಶಬ್ದಕ್ಕೂ ಅಣಿಗೆಯೆಂಬ ಕೃನ್ನಾಮಕ್ಕೂ ಸಂಬಂಧವಿಲ್ಲ. ಅದು ಬೇರೆ ಏನೋ ಇರಬೇಕು.

ಕನ್ನಡ ಕವಿಗಳು ಆರ್ದ್ರದಿಂದ ಬಂದ ಒಲ್ಲವನ್ನು ಪ್ರಾಕೃತದಿಂದ ತೆಗೆದುಕೊಂಡು ಅದಕ್ಕೆ ಅಣಿಗೆ ಎಂಬ ಶುದ್ಧ ಕನ್ನಡ ಪದವನ್ನು ಸೇರಿಸಿ ಸಮಾಸಮಾಡಿಕೊಂಡರೆಂದು ಭಾವಿಸುವುದಕ್ಕಿಂತ ಸಂಸ್ಕೃತದ ಇಡಿ ಸಮಾಸವೊಂದನ್ನು ಕನ್ನಡಕ್ಕೆ ತದ್ಭವಮಾಡಿಕೊಂಡರೆಂದು ತಿಳಿಯುವುದು ಹೆಚ್ಚು ಸಂಗತ. ಹಾಗಾದರೆ ಆ ಸಮಾಸವೇನಿರಬಹುದು ? "ಪಟಿಯೆಂದು ವಸ್ತ್ರವಿಶೇಷಮುಂ" ಎಂಬ ಕೇಶಿರಾಜನ ಮಾತಿನಲ್ಲಿರುವ ಪಟಿ ಸಂಸ್ಕೃತದ ಪಟಿ ಎಂಬುದರಿಂದ ಜನ್ಯವಾದುದು; ಪಟಿ> ಪಡಿ> ಪಟಿ; ಸ್ವಾರ್ಥದಲ್ಲಿ ಇದಕ್ಕೆ ಸೇರುವ ಕ ಪ್ರತ್ಯಯ ಸಮೇತವಾಗಿ ಪಟಿಗೆ ಎಂದಾಗುತ್ತದೆ. ಕಿಟ್ಟೆಲ್ ಅವರು ಪಟಿಯ ಮೂಲವನ್ನು ಸರಿಯಾಗಿಯೇ ನಿರ್ದೇಶಿಸಿದ್ದಾರೆ. ಆ ಸಮಾಸದ ಉತ್ತರಪದ ಪಟಿಕಾ> ಪಟಿಗೆ ಆಗಿರಬೇಕು. ಆರ್ದ್ರಪಟಿಕಾ ಎಂಬುದರಿಂದ ಒಲ್ಲವಟಿಗೆ ಎಂದಾಗಿ ಅದೇ ಕಾಲ ಕ್ರಮದಲ್ಲಿ ಸ್ವಲ್ಪ ಅರ್ಥ ವ್ಯತ್ಯಾಸವನ್ನು ಹೊಂದಿ ಒಲ್ಲಣಿಗೆಯಾಗಿ ಪರಿಣಮಿಸಿದೆ. ಇದರ ಚರಿತ್ರೆಯನ್ನು ಹೀಗೆ ಕಾಣಿಸಬಹುದು:

ಆರ್ದ್ರಪಟಿಕಾ> *ಒಲ್ಲವಡಿಗ> *ಒಲ್ಲವಟಿಗ> *ಒಲ್ಲಳಿಗೆ > ಒಲ್ಲಣಿಗೆ. ಆದ್ದರಿಂದ ಒಲ್ಲಣಿಗೆಯ ಒಲ್ಲವೂ ಅಣಿಗೆಯೂ ಶುದ್ಧ ಕನ್ನಡ ಪದಗಳಲ್ಲ; ದೇಶ್ಯ ಶಬ್ದವಾದ ಅಣಿಗೆಯೇ ಬೇರೆ, ಇಲ್ಲಿನದೇ ಬೇರೆ. ಇಲ್ಲಿನ ಅಣಿಗೆ 'ಪಟಿಕಾದ' ಸವೆದರೂಪ. ಒಲ್ಲಣಿಗೆಯೆಂಬ ಕರ್ಮಧಾರಯ ಸಮಾಸದಲ್ಲಿ ಪೂರ್ವ ಪದವಾದ ಒಲ್ಲ< ಆರ್ದ್ರ ವಿಶೇಷಣ; ಉತ್ತರಪದವಾದ ಅಣಿಗೆ<ಪಟಿಕಾ ವಿಶೇಷ್ಯ. ಹೀಗೆಯೇ ಪಟ್ಟಪಟಿಕಾ ಎಂಬೊಂದು ಸಂಸ್ಕೃತ ಸಮಾಸದಿಂದ ಪಟ್ಟಳಿಗೆ, ಪಟ್ಟಣಿಗೆ ಎಂಬ ಶಬ್ದ ಸಂಜನಿಸಿರುವಂತೆ ಬೋಧೆಯಾಗುತ್ತದೆ.

ಶ್ರೀ ದೇಶಾಯಿಯವರು ಪ್ರಾಸಂಗಿಕವಾಗಿ ಹೇಳಿರುವ ಕೆಲವು ಅಭಿಪ್ರಾಯಗಳ ಸಾರಾಸಾರತೆಯನ್ನು ವಿಚಾರಿಸಬೇಕಾಗಿದೆ. (೧) "ಅಣಿಗೆಯೇ ಹಣಿಗೆ ಆಗಿದೆ." ಹಣಿಗೆ> ಅಣಿಗೆಯಾಗುವುದು ಸ್ವಾಭಾವಿಕವೇ ಹೊರತು ಅಣಿಗೆ ಹಣಿಗೆಯಾಗುವುದಿಲ್ಲ. 'ಹಣಿಗೆ' ಯೆಂಬುದು ಕೂಡ ಅದಕ್ಕಿಂತ ಪ್ರಾಚೀನವಾದ 'ಪಣಿಗೆ' ಎಂಬುದರಿಂದ ಬಂದದ್ದು. ದುಶ್ಯಾಸನನ ಎದೆಯ ರಕ್ತವನ್ನು ದ್ರೌಪದಿಯ ಜಡೆಗಟ್ಟಿದ ಮುಡಿಯಮೇಲೆ ಭೀಮಸೇನ ಸುರಿದು ಸುರಿದು ಕುರುಳ ಸಿಕ್ಕನ್ನು ಬಿಡಿಸಿ ತನ್ನ "ವೈರಿಯ ಪಲ್ಲಪಣಿಗೆಯಿಂ ಬಾರ್ಚಿ"ದನೆಂದು ಪಂಪನ ವರ್ಣನೆ. ಈ ಶಬ್ದ ಕಿಟ್ಟೆಲ್ ಅವರ ಕೋಶದಲ್ಲಿ ಕಾಣುವುದಿಲ್ಲ. ಅದನ್ನೂ ಸೇರಿಸಿಕೊಂಡರೆ ಪಣಿಗೆ> ಹಣಿಗೆ > ಅಣಿಗೆ ಎಂಬ ಈದಿಕ್ಕಿನಲ್ಲಿ ರೂಪವ್ಯತ್ಯಾಸಗಳಾ

5. ನೇಮಿನಾಥಪುರಾಣ ೫–೩೬.

ಗಿರುವುದು ಸಹಜವೆಂದೂ ಎದುರು ದಿಕ್ಕಿನ ವ್ಯತ್ಯಾಸ ಅಸಹಜವೆಂದೂ ಹೇಳಬಹುದು. ಬಾರ್ಚು > ಬಾಚು + ಹಣಿಗೆ = ಬಾಚ್ಚಣಿಗೆ ಆಗಿ ಅನಂತರ ಬಾಚಣಿಗೆ ಆಗಿದೆ; ಸೀರಣಿಗೆಯೂ ಇಂತೆಯೇ ರೂಪುಗೊಂಡಿದೆ. (೨) "ಅಣಿಗೆಯ ಅಸ್ತಿತ್ವವನ್ನು ಮೆರವಣಿಗೆ, ಬಾಚಣಿಕೆ, ಬೀಸಣಿಕೆ, ಕೊಲ್ಲಣಿಗೆ, ಅಡ್ಡಣಿಗೆ ಮುಂತಾದುವುಗಳಲ್ಲಿ ಕಂಡು ಹಿಡಿಯಬಹುದು." ಈ ಅಭಿಪ್ರಾಯ ಮೇಲು ನೋಟಕ್ಕೆ ರಮಣೀಯ, ಒಳಹೊಕ್ಕು ನೋಡಿದರೆ ಬರಿ ಮಾಯೆ. **ಮೆಱೆವಣಿಗೆ> ಮೆರವಣಿಗೆ** ಎಂಬಲ್ಲಿ 'ವಣಿಗೆ' ಎಂಬುದು ಮೆಱೆಯೆಂಬ ಕ್ರಿಯಾರ್ಥಕ ಧಾತುವಿಗೆ ಸೇರಿರುವುದರಿಂದ ಅದು ಕೃತ್ಪ್ರತ್ಯಯವಾಗಿರಬೇಕು. ಹೀಗೆಯೇ "ನೆಱೆವಣಿಗೆಗುಂದಿತ್ತು ಬಲ ಕೈವ್ಯೈಮಱೆದರದಟರು"[೫] ಎಂಬ ಕುಮಾರವ್ಯಾಸನ ಸೂಕ್ತಿಯಲ್ಲಿ ಕಾಣುವ 'ನೆಱೆವಣಿಗೆ'ಯಲ್ಲಿಯೂ ಇರುವ ಪ್ರತ್ಯಯ 'ವಣಿಗೆ'; 'ಅಣಿಗೆ'ಯಲ್ಲ. **ಬಾಚಣಿಕೆಯ** ವಿಷಯವನ್ನು ಹಿಂದೆ (೧) ರಲ್ಲಿಯೇ ಹೇಳಿದೆ. **ಬೀಸಣಿಕೆ(ಗೆ)** ಎಂಬ ಶಬ್ದದ ನಿಷ್ಪತ್ತಿ ಕೊಂಚ ತೊಡಕಾದದ್ದು. ಅದು ಬೀಸು (ತ. ವೀಶು; ತೆ. ವೀಚು; ಮ. ವೀಚುಕ) ಎಂಬ ಕನ್ನಡದ ಕ್ರಿಯಾರ್ಥಕ ಧಾತುವಿನಿಂದ ಸಿದ್ಧವಾದ ಪದವಾಗಿದ್ದರೆ ಆಗ ಅದರಲ್ಲಿನ ಅಣಿಕೆ(ಗೆ) ಎಂಬುದು ಕೃತ್ಪ್ರತ್ಯಯವಾಗಿರಬೇಕು; ಈ ಪ್ರತ್ಯಯವನ್ನು ಕನ್ನಡ ವ್ಯಾಕರಣಗಳು ಎಲ್ಲಿಯೂ ಹೇಳಿಲ್ಲ. ಅಣಿಕೆ(ಗೆ) ಕೃನ್ನಾಮವೆಂದು ಹೇಳುವುದಾದರೆ ಆಗ ಬೀಸು ಎಂಬ ಕ್ರಿಯಾಧಾತುವಿಗೆ ಅಣಿಗೆ ಸೇರಿ ಸಮಾಸವಾಗಿರಬೇಕು. ಹಾಗಿದ್ದರೆ ಅದರ ಅರ್ಥ ಬೀಸುವ ಸೊಗಸು ಇತ್ಯಾದಿ ಆಗುತ್ತದೆಯೇ ವಿನಾ ಬೀಸಿಕೊಳ್ಳುವ ಉಪಕರಣವಾಗುವುದಿಲ್ಲ. ಆದ್ದರಿಂದ 'ಬೀಸಣಿಗೆ'ಗೂ ಬೀಸು ಎಂಬ ಅಚ್ಚಗನ್ನಡ ಕ್ರಿಯಾಧಾತುವಿಗೂ ಯಾವ ಸಂಬಂಧವೂ ಇಲ್ಲ. ಸಂಸ್ಕೃತದ ವೀಜ್ (ವಿಜ್) ಎಂಬ ಧಾತುವಿನಿಂದ (ಅರ್ಥ ಗಾಳಿಹಾಕು ಇತ್ಯಾದಿ) ಹುಟ್ಟಿರುವ ವೀಜನ (ನಿ ಕಾ) ಎಂಬ ಶಬ್ದದಿಂದ ಬೀಸಣಿಗೆ ಬಂದಿದೆ; ಬಿಜ್ಜಣಿಗೆ ಎಂಬ ಆ ಪದದ ಇನ್ನೊಂದು ರೂಪ ಅದು ಮೇಲ್ಕಂಡ ಸಂಸ್ಕೃತ ಧಾತುವಿನಿಂದ ಬಂದದ್ದೆಂಬುದನ್ನು ಸ್ಪಷ್ಟವಾಗಿ ತೋರಿಸುತ್ತಿದೆ. **ಕೊಲ್ಲಣಿಗೆ:** 'ಅಣಿಗೆ' ಯೆಂಬ ಕೃತ್ಪ್ರತ್ಯಯವೇ ಇಲ್ಲದಿರುವುದರಿಂದ ಕೊಲ್ಲಣಿಗೆಯನ್ನು ಕೃನ್ನಾಮವಾಗಿ ಭಾವಿಸುವಂತಿಲ್ಲ. ಅದು ಕೊಲ್ + ಅಣಿಗೆಯಿಂದಾದ ಸಮಾಸವಾಗಿದ್ದ ಪಕ್ಷದಲ್ಲಿ ಕೊಲ್ಲುವ ಸೊಗಸು, ಜೋಡಣೆ ಮುಂತಾದ ಅರ್ಥವಾಗುತ್ತದೆಯೇ ಹೊರತು ಅದಕ್ಕೆ ಪ್ರಚುರವಾಗಿರುವ ಆಟವೆಂಬರ್ಥ ಬರುವುದಿಲ್ಲ. ಅದನ್ನು ಕೋಲಣಿಗೆ ಎಂದೂ ಭಾವಿಸಲಾಗುವುದಿಲ್ಲ; ಏಕೆಂದರೆ ಅಣಿಗೆ ಎಂಬ ತದ್ಧಿತ ಪ್ರತ್ಯಯವಿಲ್ಲ; ಕೋಲ್ + ಅಣಿಗೆಯಿಂದಾದ ಸಮಾಸವೆಂದು ಹೇಳುವುದಾದರೆ ಆಗ ಕೋಲಿನ ಅಲಂಕಾರ ಇತ್ಯಾದಿ ಅರ್ಥವಾಗುತ್ತದೆಯೇ ಹೊರತು ಆಟವಾಗುವುದಿಲ್ಲ. ಆದ್ದರಿಂದ ಕೊಲ್ಲಣಿಗೆ ಎಂಬ ಶಬ್ದ ಕನ್ನಡದ ಕೊಲ್, ಕೋಲ್ ಎಂಬೀ ಧಾತುಮೂಲಗಳಿಂದ ಬಂದಿಲ್ಲವೆಂದು ಹೇಳಬಹುದು. ಸಂಸ್ಕೃತದ ಖೋರ್ > ಖೋಲ್ (ಅರ್ಥ, ಕುಂಟು) ಎಂಬೀ ಧಾತುವಿನಿಂದ ಖೋಲ (ಕುಂಟಾಟ, ಕುಂಟುವಿಕೆ)—ಇದಕ್ಕೆ ಗ್ರೀಕಿನಲ್ಲಿ ಸಗೋತ್ರ ಶಬ್ದವಿದೆ— ಎಂಬ ಶಬ್ದವುಂಟಾಗಿ, ಅದು ಖೇಲನ, ಖೇಲನಕ ಎಂಬುವುಗಳಂತೆ ಖೋಲನ, ಖೋಲನಕವಾಗಿ ಅದರಿಂದ ಕೊಲ್ಲಣಿಗೆ ಎಂಬ ಶಬ್ದ ಬಂದಿದೆ; ಕುಂಟಾಟ ಎಂಬ ಸಂಕುಚಿತಾರ್ಥ ಹೋಗಿ ಆಟವೆಂಬ ವಿಸ್ತಾರಾರ್ಥ ಪ್ರಾಪ್ತವಾಗಿದೆ. '**ಅಡ್ಡಣಿಗೆ**'ಯೆಂಬುದನ್ನೂ ಶುದ್ಧ ಕನ್ನಡವೆಂದು ಹೇಳಲಾಗುವುದಿಲ್ಲ. ಅದಕ್ಕೆ ತಮಿಳು ತೆಲುಗು ಮುಂತಾದ ದ್ರಾವಿಡ ಭಾಷೆಗಳಲ್ಲಿ ಸಂವಾದಿಯಾದ ಪದವಾಗಲಿ, ಧಾತುಮೂಲವಾಗಲಿ ದೊರೆಯುವ ಹಾಗಿಲ್ಲ. ಅದು ಅನ್ಯದೇಶ್ಯವಿರಬಹುದು. ಸಂಸ್ಕೃತದ ಸ್ಥಾನ, ಸ್ಥಾಪನ ಮುಂತಾದ ಶಬ್ದಗಳ ಆದ್ಯಕ್ಷರ ಪ್ರಾಕೃತದಲ್ಲಿ ಠಕಾರವಾಗುವುದು ಸಾಮಾನ್ಯ ವ್ಯಾಪಾರ; ಠಾಣ, ಠವಣೆ ಮುಂತಾದ ಕನ್ನಡದಲ್ಲಿರುವ ತದ್ಭವ ಶಬ್ದಗಳಲ್ಲೂ ಆ ಠಕಾರವನ್ನು ನೋಡಬಹುದು. ಕನ್ನಡದ ಕಾವ್ಯಗಳಲ್ಲೂ ಶಾಸನಗಳಲ್ಲೂ ಠವಣೆಕೋಲ್ ಎಂಬ ಶಬ್ದವನ್ನು ಕ್ವಚಿತ್ತಾಗಿ ಕಾಣುತ್ತೇವೆ:

ಸೆಳೆಮುಂಚದ ಕಾಲೆಂಬ ಠವಣೆಕೋ
ಲೊಳಗೊಪ್ಪುವ ಪಾಸೆಂಬ ಕವಳಿಗೆಯೊ
ಳೆಳ ಜೌವನೆಯುವಯವಮೆಂದೆಂಬ ಲಸತ್ಪುಸ್ತಕದೊಳಗೆ!

ಎಂದು ಮಂಗರಸನೂ[೬]

ಶ್ರಿತರತ್ನ ಪೀಠವಾಲಂ
ಬಿತಲಂಬನಸವಿತಿ ನಾಲ್ಕುಮನುಯೋಗದ ಸಂ
ಗತಿಯೆನೆ ಮಣಿಖಚಿತಮದೇ
ನತಿಶಯಮಾದತ್ತೋ ಠವಣೆಕೋಲ್ ಯತಿಪತಿಯಾ ॥

---

೫. ಪಂಪಭಾರತ ೧೨-೫೫

೬. ಜಯನೃಪಕಾವ್ಯ, ೮-೫೩.

ಎಂದು ನಾಗಚಂದ್ರನೂ[೭] ಬರೆದಿದ್ದಾರೆ. ಪುಸ್ತಕಾದಿಗಳನ್ನು ಇಟ್ಟುಕೊಳ್ಳುವುದಕ್ಕಾಗಿ ಉಪಯೋಗಿಸುವ ನಾಲ್ಕು ಕಾಲುಗಳುಳ್ಳ ಪೀಠವೆಂದು ಈ ಶಬ್ದಕ್ಕರ್ಥವೆಂಬುದಾಗಿ ಫ್ಲೀಟ್ ಅವರು ಪ್ರತಿಪಾದಿಸಿದ್ದಾರೆ.[೮] ಇದು ನೇರಾಗಿ ಮೇಲಿನ ಪ್ರಯೋಗಗಳಿಗೆ ಹೊಂದಿಕೊಳ್ಳುತ್ತದೆ. ಭೀಷ್ಮನ ಶರಶಯನವನ್ನು ವರ್ಣಿಸುತ್ತ ಪಂಪನು "ಅಟ್ಟವಣೆಕೋಲ್ಗಳ ಮೇಲೆಸೆದಿರ್ದ ವೀರ ಸಿದ್ಧಾಂತದ ಶಾಸನಂ ಬರೆದ ಪೊತ್ತಗೆಯಂತಮರಾಪಗಾತ್ಮಜಂ" ಮೆರೆದನೆಂದು ಹೇಳಿದ್ದಾನೆ.[೯] ತವಣೆಕೋಲ್, ಅಟ್ಟವಣೆಕೋಲ್ ಎಂಬೀ ಎರಡು ಶಬ್ದಗಳೂ ಸಮಾನಾರ್ಥಕಗಳೆಂದು ಮೇಲಿನ ಪ್ರಯೋಗಗಳಿಂದಲೇ ಸ್ಪಷ್ಟವಾಗಿದೆ. ತವಣೆಗೆ ಮೂಲ ಸ್ಥಾಪನ ಶಬ್ದವಾಗಿರುವುದರಿಂದ ಅಟ್ಟವಣೆಗೆ ಮೂಲ ಆಸ್ಥಾಪನವೆಂದು ನೇರಾಗಿ ಹೊಳೆಯುತ್ತದೆ. ಪಾಲೀ ಭಾಷೆಯಲ್ಲಿರುವ ಅಟನೀ (ಮರಾಠಿ ಅಡಣಿ= ಮುಕ್ಕಾಲಿನ ಪೀಠ; a support, a stand inserted under the leg of a bedstead) ಎಂಬುದೂ ಅಟ್ಠಾಣ > ಆ + ಟ್ಠಾಣ (ಅರ್ಥ, Stand, post)ವೆಂಬುದೂ ಮೇಲೆ ಸೂಚಿಸಿರುವ ನಿಷ್ಪತ್ತಿಗೆ ಪುಷ್ಟಿಕೊಡುತ್ತವೆ. ಆದ್ದರಿಂದ ಅಡ್ಡಣಿಗೆಯ ಚರಿತ್ರೆ ಕನ್ನಡದಲ್ಲಿ ಹೀಗೆ:

ಆಸ್ಥಾಪನ(ನಿ)ಕ > *ಆತವಣಿಗೆ > ಅಟ್ಟವಣಿಗೆ < ಅಡ್ಡವಣಿಗೆ > ಅಡ್ಡಣಿಗೆ. ಇಂತು, ಶ್ರೀ ದೇಸಾಯಿಯವರು ಕೊಟ್ಟಿರುವ ಆವೆಲ್ಲ ಶಬ್ದಗಳನ್ನೂ ವಿಮರ್ಶೆಮಾಡಿ ನೋಡಿದಾಗ ಅವರ ಅಭಿಪ್ರಾಯ ತೀರ ನಿಸ್ಸಾರವೆಂದು ಕಂಡುಬರುತ್ತದೆ. ಆ ಶಬ್ದಗಳಲ್ಲಿ ಯಾವುದರಲ್ಲೂ ಅಣಿಯಿಂದ ಅಣಿಗೊಂಡ ಅಣಿಗೆಯನ್ನು ಕಾಣಲಾಗದಿರುವುದು ತುಂಬ ಶೋಚನೀಯ. ಮುಂದೆ ಹೂವಣಿಗೆ ಎಂದು ಅವರೇ ಕೊಟ್ಟಿರುವ ಒಂದು ಶಬ್ದದಲ್ಲಿ ಮಾತ್ರ ಹೂದೊಡಿಗೆ, ಹೂವಿನಲಂಕಾರ ಎಂಬರ್ಥವನ್ನು ಕೊಡುವ ಅಣಿಗೆ ಶಬ್ದವಿರುವಂತೆ ತೋರುತ್ತದೆ. ಇದಕ್ಕೆ ಇನ್ನೂ ಹೆಚ್ಚು ವಿಚಾರ ಆವಶ್ಯಕ.

೭. ಮಲ್ಲಿನಾಥಪುರಾಣ, ೧೦-೧೩೪.

೮. "An arrangement of four sticks fastened together in the middle, and then opened out after the fashion of a folding camp-stool, so as to stand upright on the ground and support a book laid flat on the upper ends" I. A. XII. p, 99.

೯. ಪಂಪಭಾರತ, ೧೧-೪೬.

## ೨. ಬಾದುಬೆ

ವೈಶಾಖ ಮಾಸದ ಅಮಾವಾಸ್ಯೆಗೆ 'ಬಾದಮಿ ಅಮವಾಸೆ'ಯೆಂದು ಉತ್ತರ ಕರ್ಣಾಟಕದ ರೂಢಿಯ ಹೆಸರು. ಬಾದಮಿ ಎಂಬ ಹೆಸರಿನ ಮೂಲ ಯಾವುದೆಂಬುದನ್ನೂ ಅದರರ್ಥ ಏನಿರಬಹುದೆಂಬುದನ್ನೂ ಶ್ರೀ ದೇಸಾಯಿಯವರು 'ದವನದ ಹುಣ್ಣಿವೆ' ಎಂಬ ತಮ್ಮ ಲೇಖನದಲ್ಲಿಯೂ[೧೦] 'ಕನ್ನಡ ನುಡಿಯ' ಹಿಂದಿನ ಸಂಚಿಕೆಯಲ್ಲಿಯೂ (ನವಂಬರ್) ಪ್ರಸಕ್ತ ಲೇಖನದಲ್ಲಿಯೂ ಕಂಡುಹಿಡಿಯಲು ಹವಣಿಸಿದ್ದಾರೆ. ಬಾದುಬೆ, ಬಾದುಂಬೆ, ಬಾದುಬ್ಬೆ ಎಂದು ಆ ಶಬ್ದದ ಹಳೆಯ ರೂಪಗಳಿರಬೇಕೆಂದೂ, ಅದು ಒಂದು ದೇವತೆಯ ಹೆಸರೆಂದೂ ಕೆಲವು ಶಾಸನಗಳ ಆಧಾರದಮೇಲೆ ಅವರು ನಿರ್ಣಯಿಸಿರುವುದು ಸೂಕ್ತವಾಗಿಯೇ ಇದೆ. ಈ ಶಬ್ದದ ಪ್ರಯೋಗವನ್ನು ಒಳಕೊಂಡ ಬೇರೆ ಕೆಲವು ಶಾಸನಗಳನ್ನು ಇಲ್ಲಿ ಉಲ್ಲೇಖಿಸಿದೆ:

೧. ಕ್ರಿ. ಶ. ೮೭೨ರಲ್ಲಿ ಲಿಖಿತವಾದ, ಒಂದನೆಯ ಅಮೋಘ ವರ್ಷದ ಖಾಜಿಪೇಟೆಯ ಶಾಸನ (Annual Report of Archæology, Hyderabad, 1936). ಇದರ ೨೪ನೆಯ ಪಂಕ್ತಿಯಲ್ಲಿ "ಬಾದುಬ್ಬೆಯ ಪರ್ವದಂದು" ಎಂದಿದೆ.

೨. ಇಱಿವ ಬೆಡಂಗದೇವನ ಮಗನಾದ ಕುಂದಮರಸನ ಬಳಿಗಾಂವೆಯ ಶಾಸನ; ಕ್ರಿ. ಶ. ೧೦೧೯—೨೦ರಲ್ಲಿ ರಚಿತವಾದದ್ದು; ಇದರ ೪೧ನೆಯ ಪಂಕ್ತಿಯಲ್ಲಿ "ಅಲ್ಲಿಂ ಪಡುವಲ್ ಬಾದುಂಬೆಯನಿಂ ಬಡಗಲ್ ಹೂದೋಂಟ ಕಂಬ ನಾಲ್ವತ್ತು" ಎಂದಿದೆ. ಇದಕ್ಕೆ ಫ್ಲೀಟರ ಭಾಷಾಂತರ: "To the north (of the place) called Bādumbe" (I. A. V p. 16)

೩. ಕ್ರಿ. ಶ. ೧೦೯೫ರಲ್ಲಿ ರಚಿತವಾದ ಕುಱುಗೋಡಿನ ಶಾಸನ; ಇದರ ೪೩ನೆಯ ಪಂಕ್ತಿಯಲ್ಲಿ "ಅಲ್ಲಿಯ ಬಾದುಂಬೆಯನಿಂ ಬಡಗಣ ಗದ್ದೆ ಕಟ್ಟು" ಎಂದಿದೆ. ಈ ಶಾಸನದ ಸಂಪಾದಕರು ಬಾರ್ನೆಟ್ ಅವರು ಇದರ ಅರ್ಥವನ್ನು ವಿಶದಪಡಿಸಿಲ್ಲ. (E. I. XIV p. 265 ff.)

ಇವುಗಳಿಂದಲೂ ಶ್ರೀ ದೇಸಾಯಿಯವರು ಕಾಣಿಸಿರುವ ಶಾಸನಗಳಿಂದಲೂ ಆ ಪದದ ರೂಪಭೇದಗಳು ತಿಳಿಯುತ್ತಿವೆಯೇ ಹೊರತು ಅದರ ಅರ್ಥ ಸ್ಪಷ್ಟವಾಗುವುದಿಲ್ಲ. ಅದರ ಅತಿ ಪ್ರಾಚೀನ ರೂಪ ಕ್ರಿ. ಶ.

೧೦. ಪ್ರ. ಕ. XXXII-೪, ಪು. ೮೧-೮೨.

೮೭೨ ರ ಶಾಸನದಲ್ಲಿರುವ ಬಾದುಬ್ಬೆ ಎಂಬುದು. ಕಾಲಕ್ರಮದಲ್ಲಿ ಇದರ ಬೆಳವಣಿಗೆ ಬಾದುಬ್ಬೆ > ಬಾದುಂಬೆ > ಬಾದುಬೆ, ಬಾದುಮೆ > ಬಾದವಿ ಎಂದಿರುವಂತೆ ತೋರುತ್ತದೆ. ಸಾಹಿತ್ಯದಲ್ಲಿ ಈ ಪದ ಹೆಚ್ಚಾಗಿ ಬಳಕೆಯಾಗಿಲ್ಲ. ತಿಳಿದಿರುವ ಪ್ರಯೋಗಗಳಲ್ಲಿ ಒಂದನ್ನು ಬಸವಣ್ಣನವರ ವಚನಗಳಿಂದ ಶ್ರೀ ದೇಸಾಯಿಯವರೇ ಎತ್ತಿಕೊಟ್ಟಿದ್ದಾರೆ. ಬ್ರಹ್ಮಶಿವನ ಪ್ರಯೋಗ ಹೀಗಿದೆ, (ಸಮಯ ಪರೀಕ್ಷೆ ಆಶ್ವಾಸ ೯):

ಸಾವಿರ ಖಂಡುಗವಂ ಬೆಳೆ
ದಾವೊಕ್ಕಲಮಗನದೊಂದು ಕಂಬಮನೊಯ್ದು
ಟ್ಟಾವೂರಿನ ಬಾದುಂಬೆಗೆ
ಸಾವಿರವಂ ಬೆಳೆದೆವೆಂದು ನುಡಿವರ್ ಮೂಢರ್ ॥

ಇದರಲ್ಲಿಯೂ ಆ ಶಬ್ದಾರ್ಥ ನಿಸ್ಸಂದೇಹವಾಗಿ ತಿಳಿದು ಬರುವುದಿಲ್ಲ. ಮಾಘನಂದಿ ಕೃತ 'ಶಾಸ್ತ್ರಸಾರ ಸಮುಚ್ಚಯ'ದ ಕರ್ಣಾಟಕ ಟೀಕೆಯಲ್ಲಿ ದೊರೆಯುವ[೧೧]

ಬನದಬ್ಬೆ ಬಳರಿ ಬಾದುಮೆ
ಕಿನಿಸಂಬಲಿ ಜಲದ ಜಕ್ಕಿ ಜಾತ್ರೆಯ ದೈವಂ
ಮನೆದೈವವೆಂಬಿವಿನಿತುಂ
ಜಿನಭಕ್ತಂಗೆಡದ ಕೆರ್ಪಿ [ ನಿಂ ಕರ ] ಕಷ್ಟಂ ॥

ಎಂಬ ಪದ್ಯದ ಬಾದುಮೆಯೆಂಬುದು ಒಂದು ದೇವತೆಯ ಹೆಸರೆಂದು ವಿಶದವಾಗಿದೆ. ಈ ಪದ್ಯದ ದೇವತೆಗಳೆಲ್ಲವೂ ಜೈನ ದೃಷ್ಟಿಗೆ ರೌದ್ರ ದೇವತೆಗಳಾಗಿರುವುದರಿಂದ ಅವುಗಳ ಪೂಜೆ ಸಲ್ಲದು. 'ಬಾದುಂಬೆಯ ಪರ್ವ'ವೆಂದು ಶಾಸನಗಳಲ್ಲಿ ಹೇಳಿರುವ ಹಬ್ಬ ಈ ದೇವಿಯ ಜಾತ್ರೆಯ ಕಾಲವೆಂದು ತೋರುತ್ತದೆ. ಈ ದೇವಿಗಾಗಿ ಬಿಟ್ಟ ಭೂದತ್ತಿಗಳಿಗೆ 'ಬಾದುಂಬೆಯ ಪಾಳು' ಎಂಬ ಹೆಸರಿತ್ತೆಂದು ಊಹಿಸಬಹುದು. ಬರ್ಮಗಾವುಂಡನು ಬಾದುಂಬೆಯನ್ನು ಪ್ರತಿಷ್ಠೆ ಮಾಡಿದ ಸಂಗತಿಯನ್ನು ತಿಳಿಸುವ ಬಾಳೂರಿನ ಶಾಸನವನ್ನೂ ಆ ಶಾಸನದ ಮೇಲಿರುವ ದೇವತಾಕೃತಿಯ ಶಿಲ್ಪವನ್ನೂ ಶ್ರೀ ದೇಸಾಯಿಯವರು ಆದಷ್ಟುಬೇಗನೆ ಪ್ರಕಟಿಸುವುದು ಒಳ್ಳೆಯದು. ಆದರಿಂದ ಹೆಚ್ಚಿನ ಸಂಗತಿಗಳೇನಾದರೂ ಹೊಳೆಯಬಹುದು. ಆ ದೇವತೆ ವಸಂತಾಂಬೆಯಾಗಿರಬಹುದೇ ಎಂದು ಶ್ರೀ ದೇಸಾಯಿಯವರ ಶಂಕೆ. ಬಾದಮಿ ಅಮವಾಸೆಯಲ್ಲಿ ಬಾದಾಮಿಯಲ್ಲಿ ಬನಶಂಕರಿ ಪೂಜೆ ನಡೆಯುತ್ತದೆ. ಈ ಬನಶಂಕರಿಯನ್ನು ಮೇಲಿನ ಪದ್ಯ ಬನದಬ್ಬೆ ಎಂದು ಕರೆದಿದೆ. "ನೆಲನೆಲ್ಲಂ ಕೊಂಡಾಡು ವೆಕ್ಕಲವಿರಿಯುಂ ಬನದಬ್ಬೆಯುಂ ಮಹಾಲಕ್ಷ್ಮಿಯುಂ ಕಂಚಿಯ ಕಾಮಕೋಟಿಯಂ ಕೊಳ್ಳಿಪಾಕಿಯ ಭೂತಕೋಟಿಯುಂ ಪಿಟ್ಟಾಪುರದ ಮಾರಿಕಬ್ಬೆ ಶಾಕಿನಿಯುಂ" ಎಂಬಲ್ಲಿ ನಯಸೇನ ಕವಿಯೂ ಬನದಬ್ಬೆಯನ್ನು ಹೆಸರಿಸಿದ್ದಾನೆ. (ಧರ್ಮಾಮೃತ: ೯–೧೦ ಗದ್ಯ) ವಸಂತಾಂಬೆ ಬೇರೊಂದು ಸಜಾತೀಯವಾದ ದೇವತೆಯಾಗಿರಬೇಕು.

ಕಾಳಿ ಬಳಾರಿ ಮಾರಿ ಜಲದೇವತೆ ಆನ್ನೆ ಕುಚೇಷ್ಟಿಕಂ
ಕಾಳಿ ಭಟಂಡಿ ಮುಂಡಿ ವನದೇವತೆಯುಂತರದಬ್ಬೆ ಹೇಚಕಂ (?)
ಮಾಳಬೆ ಮೂರರಬ್ಬೆ ಮಸಣಬ್ಬೆ ವಸಂತಿಕೆ ವೀರಬೊಮ್ಮಬೇ
ತಾಳ ಪಿಶಾಚ ಕೋಟಿಗಳನರ್ಚಿಸದರ್ಚಿಸು ವೀತರಾಗನಂ ॥

ಇಲ್ಲಿ ವನದೇವತೆ (ಬನದಬ್ಬೆ) ಒಂದು ದೈವ; ವಸಂತಿಕೆ (ವಸಂತಾಂಬೆ) ಮತ್ತೊಂದು ದೈವ. ಕರ್ಣಾಟಕದಲ್ಲಿ ಯಾವ ಯಾವ ದೇವತೆಗಳ ಪೂಜೆ ನಡೆಯುತ್ತಿತ್ತೆಂಬ ವಿಷಯವನ್ನು ಈ ಪದ್ಯ ಹೇಳುತ್ತದೆ. ಯಾವ ದೇವತೆಯನ್ನು ಏತಕ್ಕೆ ಹೇಗೆ ಪೂಜಿಸಬೇಕೆಂಬ ವಿಚಾರವೂ ಗೊತ್ತಾಗುತ್ತದೆ:

"ಮತ್ತಂ ತನಯರಂ ಪಡೆವೆನೆಂದು ಬನದಬ್ಬೆಗೆ ಪೇಲಬೆರಟಿಯನೀವುದುಂ, ಧನಂ ಬಡೆವೆನೆಂದು ಕೋಳಿಗೆಹಾರಂ ಬಟ್ಟುಂ (ಕಾಳಿಗೆ ಹಾಳಂ ಬಿಟ್ಟುಂ ?), ಕುತ್ತಮಂ ಕೆಡಿಸುವ ನಿಮಿತ್ತದಿಂ ಚಂಡಿಕೆಗೆ ಪಿಂಡಮನಿಟ್ಟುಂ, ಮಾರಿಗೆ ಬಾರಿ ಬಾರಿಗುರಿಯನಿತ್ತುಂ (?) ಎಱೆಯಪಂಗೆ ಮರಂಗಳಂ ಪರಸಿಯುಂ, ಜಕ್ಕಿಗೆ ಮಕ್ಕಳಂ ಬಲಿಗೊಳಿಸಿಯುಂ, ನಾಗಂಗೆ ನಾಗಂಗಳಂ ಮಾಡಿಸಿ ಕಿವಿಯೊಳಿಟ್ಟುಂ, ಬೊಮ್ಮಯ್ಯಂಗೆ ಪೂಜಿಸೆಂದು ಕೋಲೂನಳಂ (?) ಮಾಡಿಸಿ ಕಟ್ಟಿಯುಂ, ಕಾಡೆಱೆಯಂಗೆ ಪಡೆದಱೊಳು ದಸವಂದವನೀವೆನೆಂದು ಪರಸಿಯುಂ ಮತ್ತಂ ಪೆಸರ್ವೆಸರ ದೈವಂಗಳ್ಗಿಲ್ಲಾ ರೂಪಂಗಳಂ ಮಾಡಿಸಿ ಕೊರಲೊಳ್ ತಗುಳ್ಚಿಕೊಂಡುಂ" ಇತ್ಯಾದಿ.

ಬಾದುಮೆಯ ಪೂಜೆಯೂ ಹೀಗೆ ಯಾವ ರೀತಿಯಲ್ಲೋ ನಡೆಯುತ್ತಿದ್ದಿರಬೇಕು. ಹಿಮಾಲಯದ ಪ್ರದೇಶದಲ್ಲಿ 'ಬಡ್‌ಮೂನ್' ಎಂಬ ದೇವತೆಯ ಜಾತ್ರೆ ಆಶ್ವಯುಜಮಾಸ ಪಾಡ್ಯದಂದು ನಡೆಯುತ್ತದಂತೆ, ಈ ದೇವತೆಯನ್ನು ಆ ಪರ್ವತ ನಿವಾಸಿಗಳು

೧೧. ಈ ಟೀಕೆ ಯಾರಿಂದ ರಚಿತವಾದುದೋ ತಿಳಿಯದು. ಇದರಲ್ಲಿ ನಯಸೇನ, ಬ್ರಹ್ಮಶಿವ, ವಿಲಾಸ, ಜನ್ನ ಮುಂತಾದ ಕವಿಗಳ ಪದ್ಯಗಳನ್ನು ಅಲ್ಲಲ್ಲಿ ಉದಾಹರಿಸಿದೆ. "ಪ್ರಾಕ್ಕಾವ್ಯಮಾಲಿಕೆ'ಯ ಕೆಲವು ಪದ್ಯಗಳ ಆನುಪೂರ್ವಿಗೆ ಈ ಟೀಕೆ ಮೂಲವೆಂದು ಕಾಣುತ್ತದೆ. ಇದರ ಹಸ್ತಪ್ರತಿ ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟನಲ್ಲಿದೆ; ಸಂಸ್ಕೃತ ನಂ. A 469.

ಬೀರುದೇವತಾ ಎಂದೂ ಕರೆಯುತ್ತಾರಂತೆ[೧೨]. ಆ ಪಾಡ್ಯದ ದಿನ ಬೆಳಗ್ಗೆ ಒಬ್ಬ ಕ್ಷೌರಿಕನು ಥಾಲಿಯಮೇಲೆ ಉರಿಯುತ್ತಿರುವ ದೀಪವನ್ನಿಟ್ಟುಕೊಂಡು ಹಸುವಿನ ಸಗಣಿಯಿಂದ ಮಾಡಿದ ಗಣೇಶಪ್ರತಿಮೆ ಸಮೇತನಾಗಿ ರಾಜನ ಬಳಿಗೆ ಹೋಗಿ ಆ ಗಣೇಶನಿಗೆ ಪೂಜೆಮಾಡಿಸಿ, ರಾಜನ ಇತರ ಅಧಿಕಾರಿಗಳಿಂದಲೂ ಹಾಗೆಯೇ ಮಾಡಿಸುತ್ತಾನೆ. ಮಧ್ಯಾಹ್ನದಲ್ಲಿ ಕೋಣನ ಕಾಳಗ ಪ್ರದರ್ಶನ ನಡೆಯುತ್ತದೆ. ಆರೇಳು ಸಾವಿರ ಜನ ಆ ಕಾಲಕ್ಕೆ ಸೇರುತ್ತದಂತೆ. ಬಂಗಾಳದಲ್ಲಿಯೂ ಈ ಜಾತ್ರೆ ನಡೆಯುತ್ತದೆ. ಆ ಪರ್ವತ ನಿವಾಸಿಗಳ ದೊರೆ ರಾಜಾ ಮಾಲೇರ್ ಸೇನ್ ಎಂಬಾತನ ವಂಶದವರು ವಂಗದೇಶವನ್ನಾಳಿದ ಸೇನಮನೆತನಕ್ಕೆ ಸೇರಿದವರಂತೆ; ಈ ಸೇನ ದೊರೆಗಳು ಕರ್ಣಾಟಕ ವೀರಕ್ಷತ್ರಿಯರೆಂದು ಹೇಳಿಕೊಳ್ಳುವುದರಿಂದ ಅವರು ಯಾವಾಗಲೋ ಕರ್ಣಾಟಕದಿಂದ ವಂಗದೇಶಕ್ಕೆ ವಲಸೆಹೋಗಿರಬೇಕು. ಹಾಗೆ ಹೋಗಿ ಅಲ್ಲಿ ನೆಲಸಿದಮೇಲೆ "ಬಾದುಬ್ಬೆಯ ಪರ್ವ"ವನ್ನು ಅಲ್ಲಿಯೂ ಆರಂಭಿಸಿರಬಹುದು; ಆ ಬಾದುಬ್ಬೆಯೇ ಬಡ್ಮೂನ್ ದೇವತೆಯಾಗಿದೆಯೋ ಏನೋ? ಅದಕ್ಕಿರುವ ಬೀರುದೇವತಾ ಎಂಬ ಇನ್ನೊಂದು ಹೆಸರನ್ನು ನೋಡಿದರೆ ನಯಸೇನನು ಹೇಳುವ ಎಕ್ಕಲವಿರಿಗೆ ಆದೇನಾದರೂ ಸಂಬಂಧಿಸಿದೆಯೋ ಎಂಬ ಸಂದೇಹ ಮೂಡುತ್ತದೆ. "ಸಗಣಿಯ ಬೆನಕಂಗೆ ಸಂಪಗೆಯರಳಿನಲ್ಲಿ ಪೂಜಿಸಿದರೆ ರಂಜನೆಯಲ್ಲದೆ ಅದರ ಗಂಜಳ ಬಿಡದಣ್ಣ" ಎಂಬ ಬಸವಣ್ಣನವರ ವಚನವನ್ನು ನೆನೆದುಕೊಂಡರೆ ಅವರ ಕಾಲದಲ್ಲಿ ಕನ್ನಡನಾಡಿನಲ್ಲಿ ವಿನಾಯಕ ಪೂಜಕರಿದ್ದಿರಬೇಕೆಂದು ಹೇಳಬಹುದು. "ತಾಂ ತಿರಿವ ಗೊರವಿ ಬೆನಕನುಮಂ ತಿರಿಯಿಪಳ್" ಎಂಬ ನಾಣ್ಣುಡಿಯೂ ಇದಕ್ಕೆ ಪರಿಪೋಷಕವಾಗುತ್ತದೆ.[೧೩] ಆ ಹಿಮಾಚಲ ಪ್ರದೇಶದ ಸಗಣಿಯ ಬೆನಕನೂ ಈ ಬೆನಕನೂ ಒಂದೇ ಇರಬಹುದೆ? ಬಾದುಬ್ಬೆಯೆಂಬುದು ಹೆಣ್ಣುದೇವತೆಯಾಗಿದ್ದರೆ 'ವೈನಾಯಕ ಶಕ್ತಿ' ಎಂಬೊಂದು ಹೆಣ್ಣುದೇವತೆಯೂ ಇದೆ.[೧೪] ಆಕಾರವೇನೋ ಗಣೇಶನದೇ. ಹಲವು ಸಮಸ್ಯೆಗಳಿಂದ ತುಂಬಿದೆ ಈ ವಿಷಯ. ಬಾದುಂಬೆ ದೇಶ್ಯವೋ ಅನ್ಯದೇಶ್ಯವೋ ಎಂಬುದನ್ನು ನಿರ್ಣಯಿಸುವುದಕ್ಕೂ, ಅದು ಯಾವ ದೇವತೆಯೆಂಬುದಕ್ಕೂ ಇದುವರೆಗೆ ದೊರೆತಿರುವ ಸಾಕ್ಷ್ಯಗಳು ಸಾಲವು. ಅದು ಸಂಸ್ಕೃತಭವವಾಗಿರುವ ಪಕ್ಷದಲ್ಲಿ ಬಹುಶಃ ಭದ್ರಾಂಬಾ (ದುರ್ಗಿಯ ಒಂದು ಆಕಾರ) ಎಂಬುದರಿಂದ ಬಂದಿರಬಹುದು.

### ೩. ತ್ರಾಸು.

ಈ ಶಬ್ದವು ಬಸವೇಶ್ವರ ವಚನಗಳಲ್ಲೂ ಶಿವಮೊಗ್ಗೆ ತಾಲ್ಲೂಕಿನ ೬ಳನೆಯ ಶಾಸನದಲ್ಲಿಯೂ ಬರುತ್ತದೆಂದು ಹೇಳಿ ಶ್ರೀ ದೇಸಾಯಿಯವರು ಆ ಪ್ರಯೋಗಗಳನ್ನು ಉದ್ಧರಿಸಿಕೊಟ್ಟಿದ್ದಾರೆ; ಆ ಶಾಸನದ ಕಾಲ ಸು, ಕ್ರಿ.ಶ. ೧೧೧೨. ತರಾಜೂ ಎಂಬ ಪಾರಶಿ ಭಾಷೆಯ ಶಬ್ದ ಕನ್ನಡಕ್ಕೆ ತ್ರಾಸು ಆಗಿ ಹಿಂದಿನ ಕಾಲದಿಂದಲೂ ಪ್ರಯೋಗದಲ್ಲಿದೆಯೆಂಬುದನ್ನು ಅವರು ತೋರಿಸಿದ್ದಾರೆ. ಸಾಹಿತ್ಯದಲ್ಲಿ ಇದರ ಬಳಕೆಯನ್ನು ಇನ್ನೂ ಕೆಲವೆಡೆ ಕಾಣಬಹುದು.

೧. ನಯಸೇನನ ಧರ್ಮಾಮೃತ: ಕಾಲ ಕ್ರಿ.ಶ. ೧೧೧೨.

ಲೇಸು ಬಹಿರಂಗವಿಲ್ಲದೊ
ಡಾಸೆಯದೇನಂತರಂಗಮುಂ ತನಗಿನಿಸುಂ
ಲೇಸಾಗಲಱಿಯದೆಂತೆನೆ
ತ್ರಾಸಿನ ಕೊಡನೊಂದು ಬಿರ್ದೊಡೊಂದುೞಿದಪುದೇ ॥ ೫-೧೦೭

೨. ಹರಿಹರನ ರಗಳೆಗಳು (ಭಾಗ ೬); ಕಾಲ ಸು ೧೨೨೦; ಅಮರನೀತಿಗಳ ರಗಳೆ (ಪು ೧೦೨).

ಒಂದು ದೆಸೆಯ ತ್ರಾಸನಮರನೀತಿಗಳೇಱಿ
ಯೊಂದು ದೆಶೆಯ ತ್ರಾಸನೆಮ್ಮ ಶಂಕರನೇಱಿ
ಸಮತೂಕವಾಯಿತ್ತು ಶಂಕರನ ಭಕ್ತಿಯ ತ್ರಾಸು
ಸಮವಾಯ್ತು ದೇವಭಕ್ತರ ತೂಕದಾ ತ್ರಾಸು

ಇಲ್ಲಿ ತ್ರಾಸು ಎಂಬುದಕ್ಕೆ ತಕ್ಕಡಿಯೆಂಬ ಸಾಮಾನ್ಯಾರ್ಥವೇ ಅಲ್ಲದೆ ಅದರ ಇಕ್ಕಡೆಯ ಒಂದೊಂದು ಹಲ್ಲೆಗೂ ತ್ರಾಸು ಎಂದು ಕರೆದಿದೆ. ಆ ಶಬ್ದ ಕನ್ನಡಕ್ಕೆ ಬಂದು ಸ್ವಲ್ಪ ಅರ್ಥ ವ್ಯತ್ಯಾಸವನ್ನೂ ಹರಿಹರನ ಕಾಲಕ್ಕಾಗಲೇ ಪಡೆದಿತ್ತೆಂದು ಹೇಳಬಹುದು.

---

೧೨. H. A. Rose: Hinduism in the Himalayas; I. A. XXXVI, p 42-43.

೧೩. ಪೊನ್ನನ ಶಾಂತಿಪುರಾಣ ೮-೧೩೦; ಬ್ರಹ್ಮಶಿವ; ಸಮಯ ಪರೀಕ್ಷೆ ಆ. ೧೩ ೧೪.

೧೪. "An unique image, the Sakti of Ganesa, is also to be seen in this collection! It is an elephant-headed goddess, seated with a rat on the pedestal", R. D. Banerji: Eastern Indian School of Medieval Sculpture, p 117.



# 'ಮಾತೆಂಬುದು ಜ್ಯೋತಿರ್ಲಿಂಗ'*

ಶ್ರೀ ರಂ. ಶ್ರೀ. ಮುಗಳಿ

ಇಂದು ಮಾತು ಸವೆದು ಹೋದ ನಾಣ್ಯದಂತಾಗಿದೆ. ಅದಕ್ಕೆ ಬಳಕೆಯಿದೆ, ಹೊಳಪಿಲ್ಲ, ಚೆಲುವಿಲ್ಲ. ಸವೆದ ನಾಣ್ಯಗಳನ್ನು ಚಲಾವಣೆಯಲ್ಲಿ ಇಡಬಾರದು, ಆದರೆ ಇಟ್ಟುಕೊಳ್ಳುತ್ತೇವೆ. ಒಬ್ಬರ ಕೈಯಿಂದ ಇನ್ನೊಬ್ಬರ ಕೈಗೆ ದಾಟಿಸುತ್ತೇವೆ. ಹಾಗೇ ಮಾತು. ನಮ್ಮ ಮಾತು ಅಸಮರ್ಥವಾಗಿದೆ. ಕಾಂತಿಹೀನವಾಗಿದೆ ಎಂದು ನಾವು ಅರಿತರೂ ಅದನ್ನು ಇದ್ದಹಾಗೆ ಬಳಸುತ್ತೇವೆ. ನಮ್ಮ ಮಕ್ಕಳಿಗೆ ಅದರ ಪರಂಪರೆಯನ್ನು ಅರ್ಪಿಸುತ್ತೇವೆ. ಒಂದು ತಲೆಮಾರಿಗೆ ತಲೆಮಾರೇ ಈ ರೀತಿಯಾಗಿ ನಮ್ಮ ಅರೆಮಾತಿನ ಆಸ್ತಿಗೆ ಒಡೆತನವನ್ನು ಪಡೆಯುತ್ತದೆ. ಸಹಜವಾಗಿ ತನ್ನದೇ ಆದ ಅಸಮರ್ಥವಾದ ಮಾತನ್ನೂ ಸಮರ್ಥಿಸತೊಡಗುತ್ತದೆ. ತನ್ನ ಮುಂದಿನ ಪೀಳಿಗೆಗೆ ಅದನ್ನು ಇನ್ನಿಷ್ಟು ವಿಕಾರಗೊಳಿಸಿ ನೀಡುವಾಗ ಇದು ಅಪರಿಹಾರ್ಯವಾದ ದೌರ್ಬಲ್ಯ, ಇದನ್ನು ಇದ್ದಂತೆ ಇರಗೊಡುವುದೇ ವ್ಯವಹಾರ್ಯ ಎಂಬ ನಂಬಿಕೆ ದೃಢಪಡುತ್ತದೆ.

ಕನ್ನಡ ಮಾತು ಈ ಸಾಮಾನ್ಯ ಮಾತಿಗೆ ಉತ್ತಮ ನಿದರ್ಶನವಾಗಿದೆ, ಅಪವಾದವಂತೂ ಅಲ್ಲವೇ ಅಲ್ಲ. ನೂರಾರು ವರ್ಷಗಳ ಚರಿತ್ರೆಯಲ್ಲಿ ಕನ್ನಡ ನಾಡು ಬೇರೆ ಬೇರೆ ರಾಜಕೀಯ ಶಕ್ತಿಗಳ ಸೆಳೆತಕ್ಕೆ ಸಿಕ್ಕು ಒಡೆದು ಹೋಳಾದಂತೆ ಕನ್ನಡ ನುಡಿಯೂ ಸಾಂಸ್ಕೃತಿಕ ಆಘಾತಗಳಿಗೆ ಒಳಗಾಗಿ ಚೂರುಚೂರಾಗಿದೆ. ಎಳಮಕ್ಕಳ ಮಾತಿನಂತೆ ಹಲವು ಸಲ ನಮ್ಮ ಕನ್ನಡ ತೊದಲು ಮಾತು, ಹರುಕು ಮುರುಕಾದ ನುಡಿ; ಮೇಲೆ ಹಲವಾರು ನುಡಿಗಳ ಅನಾವಶ್ಯಕಮಿಶ್ರಣದಿಂದ ಆದ 'ಕಿಚಡಿ'ಯಾಗಿ ಪರಿಣಮಿಸಿದೆ. ನಮ್ಮ ಇಂದಿನ ಮಾತನ್ನು ಕೇಳಿದರೆ ಕನ್ನಡಕ್ಕೆ ಮಾತಿನ ಎಲ್ಲ ಒಲ್ಮೆಯನ್ನು ತೋರಿಸುವ ಶಕ್ತಿ ಹಿಂದೆ ಇತ್ತೇ, ಇಂದು ಇದೆಯೇ ಎಂಬ ಪ್ರಶ್ನೆ ಏಳಬಹುದು. ಅದಕ್ಕೆ ಹಿಂದೆ ಶಕ್ತಿ ಇತ್ತು, ಇಂದು ನಾಳೆ ನಾವೂ ಆ ಶಕ್ತಿಯನ್ನು ಪಡೆಯಬಹುದು. ಬಾಯಿ ಮಾತು, ಬರೆವಣಿಗೆಯ ಮಾತು, ಎರಡರಲ್ಲಿಯೂ ಕನ್ನಡವು ಮುತ್ತಿನಂಥ, ಅದೇಕೆ ಕಿಡಿಯಂಥ, ವಜ್ರದ ಹರಳಿನಂಥ ಮಾತಾಗಬಲ್ಲದು. ಅದರ ಉಚ್ಚತಮ ಆದರ್ಶವೆಂದರೆ 'ಮಾತೆಂಬುದು ಜ್ಯೋತಿರ್ಲಿಂಗ'ವಾಗುವುದು ಸಾಧ್ಯ.

ಮಾತು ಇದು ಮೂಲದಲ್ಲಿ ದ್ರಾವಿಡ ಶಬ್ದ. ಮಾಱ್, ಮಱು ಇದರಲ್ಲಿ ಇದರ ಮೂಲಪ್ರಕೃತಿ ಇದೆ. ತಮಿಳಿನಲ್ಲಿ ಇದು ಮಱುವ್, ತೆಲುಗಿನಲ್ಲಿ ಮಾಟ ಎಂದಾಗಿದ್ದು ಕನ್ನಡದಲ್ಲಿ ಮಾತು ಆಗಿದೆ. ಈ ಮಾತಿನ ಮೂಲದಲ್ಲಿಯೇ ಮಾತಿನ ಎಲ್ಲ ರಹಸ್ಯವಿದೆ. ಮಾತು ಮೂಲತಃ ಮಾರು ಎಂದರೆ ಉತ್ತರ ರೂಪ. ಧ್ವನಿಗೆ ಪ್ರತಿಧ್ವನಿ, ಕ್ರಿಯೆಗೆ ಪ್ರತಿಕ್ರಿಯೆ ಇದ್ದಂತೆ ಯಾವುದಕ್ಕೋ ಮಾತೆಂಬುದು ಉತ್ತರ (Response). ಅದೇ ನುಡಿಯೆಂಬುದು ತಾನಾಗಿ ಮೊದಲು ನುಡಿದುದು. ಮೂಲತಃ ನುಡಿ ಬೇರೆ, ಮಾತು ಬೇರೆ. ತರುವಾಯದ ರೂಢಿಯಲ್ಲಿ ಅವು ಹತ್ತಿರ ಬಂದುವು. 'ಮಾತಿಗೆ ಮಾತು ಬೆಳೆಯಿತು' ಎಂಬ ದೇಸಿಯಲ್ಲಿ ಮೂಲಾರ್ಥದ ಸೂಚನೆ ಇದ್ದಂತಿದೆ. ವಚನ, ಭಾಷೆ, ಪ್ರತಿಜ್ಞೆ, ಎಂಬ ಅರ್ಥದಲ್ಲಿ ಮುಂದೆ ಮಾತಿಗೆ ಒಳ್ಳೆಯ ಅರ್ಥ ಬಂದಿತು. ಕೃತಿಶೂನ್ಯವಾದ, ಕೃತಕವಾದ ಉಕ್ತಿ, ಬರಿಮಾತು ಎಂಬ ಅರ್ಥದಲ್ಲಿ ಒಳ್ಳೆಯದಲ್ಲದರ ಅರ್ಥವೂ ಬಂದಿತು. ಮಾತೆಂದರೆ ಶಬ್ದ, ಶ್ರುತಿ, ದೈವವಾಣಿ ಎಂಬ ಶ್ರೇಷ್ಠವಾದ ಅರ್ಥವು 'ಮಾತೆಂಬುದು ಜ್ಯೋತಿರ್ಲಿಂಗ' ಎಂಬ ಅಲ್ಲಮಪ್ರಭುಗಳ ಸೂತ್ರರೂಪವಚನದಲ್ಲಿ ಬಂದಿತು.

ಮಾತಿನ ಅರ್ಥವಿಕಾಸ ವ್ಯಕ್ತಿವಿಕಾಸದ ಮತ್ತು ನಾಗರಿಕತೆಯ ಪ್ರಗತಿಯ ಗುರುತಾಗಿದೆ. ವ್ಯಕ್ತಿ ಎಷ್ಟು ಬೆಳೆಯುವನೋ ಅಷ್ಟು ಅವನ ಕೂಡ ಅವನ ಮಾತು ಬೆಳೆಯುತ್ತದೆ. ಅವನ ವಿಕಾಸದ ಅಳತೆಗೋಲು ಅವನ ಮಾತು. ಇದು ಸಾಮಾನ್ಯ ಸೂತ್ರ. ಹುಟ್ಟು ಮೂಕನಾಗಿದ್ದವನು ಸಂಸ್ಕಾರವಂತನಾಗಿರಬಹುದು. ಮೌನಿಯಾದ ಮುನಿಯು ಮಾತನ್ನು ಬಿಟ್ಟರೂ ಮನಃಪರಿಪಾಕವನ್ನು ಪಡೆದೇ ಇರುತ್ತಾನೆ. ಸುಸಂಸ್ಕೃತರಾದ ಹಲ

* ಮೈಸೂರು ಆಕಾಶವಾಣಿಯ ಅನುಮತಿಯಿಂದ ಪ್ರಕಟಿಸಲಾಗಿದೆ.

ಕೆಲವರು ಮಾತಿನ ಹೆಳವರಾಗಿರಬಹುದು. ಈ ಅಪವಾದಗಳೆಲ್ಲ ಮೇಲಿನ ಸೂತ್ರಕ್ಕೆ ಬಾಧಕವಾಗಿಲ್ಲ. ವ್ಯಕ್ತಿಗಳ ಸಮೂಹವಾದ ನಾಗರಿಕತೆಗಳಿಗೂ ಇದು ಸರಿಹೋಗುತ್ತದೆ. ಒಂದು ಜನ, ಒಂದು ನಾಗರಿಕತೆ, ಎಷ್ಟು ಮುಂದುವರಿದಿದೆ, ಎಷ್ಟು ಸಂಸ್ಕಾರಹೊಂದಿದೆ ಎಂಬುದನ್ನು ಅರಿತುಕೊಳ್ಳಲು ಅದರ ಮಾತು ಎಂಬುದೇ ನಿದರ್ಶನ. ಮಾತಿನ ಮಟ್ಟ ಹೆಚ್ಚಿದಂತೆ ಸಂಸ್ಕೃತಿಯ ಮಟ್ಟ ಹೆಚ್ಚಾದದ್ದು ತಿಳಿಯುತ್ತದೆ. ಅದು ಕೆಳತರವಾದರೆ ಸಂಸ್ಕೃತಿ ಅವನತಿ ಹೊಂದಿದೆ ಎಂದೂ ತಿಳಿಯುತ್ತದೆ.

ಯಾವೊಂದು ಭಾಷೆಯ ಪ್ರಾರಂಭಿಕ ಅವಸ್ಥೆಯಲ್ಲಿ ಮಾತಿಗಿಂತ ಉಲಿಗಳೂ ಸನ್ನೆಗಳೂ ಹೆಚ್ಚು. ಆಮೇಲೆ ಬಿಡಿನುಡಿ, ತೊದಲು ನುಡಿಗಳಿರುವುದು ಎರಡನೆಯ ಅವಸ್ಥೆ. ಮೂರನೆಯ ಅವಸ್ಥೆಯಲ್ಲಿ ಪದವಾಕ್ಯರಚನೆ, ವ್ಯಾಕರಣಪ್ರಕ್ರಿಯೆ ಎಂಬುದು ಪ್ರಾರಂಭವಾಗುತ್ತದೆ. ನಾಲ್ಕನೆಯ ಅವಸ್ಥೆಯಲ್ಲಿ ಶಬ್ದಸಂಪತ್ತಿ, ಅರ್ಥಸೂಕ್ಷ್ಮತೆ, ವೈವಿಧ್ಯ, ಔಚಿತ್ಯ ಇವು ತಲೆದೋರುತ್ತವೆ. ನಾಲ್ಕನೆಯ ಅವಸ್ಥೆಯಲ್ಲಿಯ ಗುಣಗಳನ್ನು ಯಾವ ಭಾಷೆ ಬಹುಮಟ್ಟಿಗೆ ತೋರುತ್ತದೆಯೋ ಅದೇ ಸಾಕಷ್ಟು ಪರಿಪುಷ್ಟವಾದ ಪೂರ್ಣವಿಕಾಸಗೊಂಡ ಭಾಷೆಯೆಂದು ಹೇಳಲು ಅಭ್ಯಂತರವಿಲ್ಲ. ಆದರೆ ಈ ವಿಕಾಸಕ್ಕೆ ಹಿಂದೆ ಹೇಳಿದಂತೆ ವ್ಯಷ್ಟಿ–ಸಮಷ್ಟಿಗಳ ಅಂದರೆ ವ್ಯಕ್ತಿಗಳ ಹಾಗೂ ಸಮೂಹಗಳ ಸಮಪ್ರಮಾಣದ ವಿಕಾಸವು ಅಗತ್ಯ. ಅಂತೂ ಮಾತು ತನ್ನ ಪ್ರಗತಿಯನ್ನು ತೋರಿಸುತ್ತ ತನ್ನ ಪರಮಸೀಮೆಯನ್ನು ಮುಟ್ಟುವುದಾದರೆ ಮಾತುಗನು ಪ್ರಗತಿಹೊಂದಬೇಕು, ಪರಿಣತಪ್ರಜ್ಞನಾಗಬೇಕು.

ಮಾತಿನ ಈ ನೆಲೆಬೆಲೆಗಳನ್ನು ಕನ್ನಡಿಗರು ಚೆನ್ನಾಗಿ ಅರಿತವರಾಗಿದ್ದರು. ಕನ್ನಡ ಸಾಹಿತ್ಯವು ನೃಪತುಂಗನ ಕಾಲದಿಂದಲೂ ಇದಕ್ಕೆ ದೃಷ್ಟಾಂತಗಳನ್ನು ಒದಗಿಸುತ್ತದೆ. ಕುರಿತಂತೆ ಪೆರರ ಬಗೆಯನ್ನು ನೆರೆತೆರೆಯಲರಿವವನು ಮಾತರಿವನೆಂದು 'ಕವಿರಾಜಮಾರ್ಗ'ವು ಸಂಗ್ರಹವಾಗಿ ಸೊಗಸಾಗಿ ಹೇಳಿರುತ್ತದೆ. ಮನಸ್ಸಿನಲ್ಲಿ ಹೇಳಬೇಕೆಂದು ಮಾಡಿದ್ದನ್ನು ಆ ಮನಸ್ಸಿನಲ್ಲಿಯ ಯಥಾರ್ಥವಾದ ಆಶಯವು ಇದ್ದಂತೆ ಬೇರೆಯವರ ಮನಸ್ಸನ್ನು ನೆರೆತೆರೆದು ಒಳಹೋಗುವಂತೆ ಮಾಡುವವನೇ ಮಾತು ಅರಿವ, ಮಾತರಿವನು. ಬೇರೆಯವರ ಮನಸ್ಸು ಹೇಳುವವನ ಮನಸ್ಸಿನ ಆಶಯದ ವಿಷಯದಲ್ಲಿ ಅಜ್ಞ, ಉದಾಸೀನ, ಅರಿಯಲು ಅಸಮರ್ಥ, ಇಷ್ಟೇಕೆ ವಿರುದ್ಧವಾಗಿರಬಹುದು. ಆದರೆ ಇಂಥ ಮನಸ್ಸೂ ಮುಚ್ಚಿದ ಬಾಗಿಲು ತೆರೆದಂತೆ ತೆರೆದು ಬೇರೆ ಮನಸ್ಸಿನ ಭಾವವನ್ನು ಸ್ವೀಕರಿಸಿ ಮೆಚ್ಚಿದರೆ ಅದು ಮಾತರಿವನ ನೈಪುಣ್ಯ. ವಾಗ್ಮಿಯಲ್ಲಿ ಈ ಸಾಮರ್ಥ್ಯ ಉತ್ಕಟವಾಗಿರುತ್ತದೆ. ಆದರೆ ವಾಗ್ಮಿಯ ಮಾತು ನಾಟಕೀಯ, ಕೃತಕ, ಏಕಾಂಗಿ ಆಗಬಹುದು. ಮಾತರಿವನ ಮಾತು ಹಾಗಲ್ಲ. ಅದು ಅಕೃತಕ, ಸಹಜ ಆದರೂ ಪ್ರಭಾವಿಯಾದ ವಶೀಕರಣಯಂತ್ರ. ಕನ್ನಡನಾಡಿನ ಜನಸಾಮಾನ್ಯದ ಮಾತು ಜಾಣ್ಮೆಯ ಪ್ರತಿನಿಧಿಯಾದ ಸರ್ವಜ್ಞನು 'ಮಾತಿನಲಿ ಸೋತವನೆ ಜಾಣ', 'ಲೋಕಕ್ಕೆ ಮಾತೆ ಮಾಣಿಕವು', 'ಮಾತು ಬಲ್ಲಾತಂಗೆ ಯಾತವದು ಸುರಿದಂತೆ', 'ರಸಿಕನಾಡಿದ ಮಾತು ಶಶಿಯುದಿಸಿ ಬಂದಂತೆ,' 'ಮಾತಾಡಿದಂತೆ ನಡೆದಾತ ಜಗವನು ಕೂತಲ್ಲೆ ಆಳ್ವ,' ಎಂದು ಮುಂತಾದ ವಾಕ್ಯಗಳಲ್ಲಿ ಮಾತಿನ ಮಹಿಮೆಯನ್ನು ಹೇಳಿದ್ದಾನೆ.

ಮಾತಿನ ವಿಕಾಸದಲ್ಲಿ ಮೂರು ಮೆಟ್ಟಲುಗಳು ಎದ್ದು ಕಾಣುತ್ತವೆ. ಅವು ಅದರ ವಿಕಾಸವನ್ನು ಸೂಚಿಸುತ್ತ ಅದಕ್ಕೆ ಪ್ರೇರಕವಾದ ಆಂತರಿಕ ಶಕ್ತಿಗಳ ಅಭಿವ್ಯಕ್ತಿಗಳಾಗಿರುತ್ತವೆ. ಮೊದಲನೆಯ ಮೆಟ್ಟಲಲ್ಲಿ ಮಾತು ಒಂದು ಕುರುಹು, ಒಂದು ಸಂಕೇತ, ಸಾಧನವಾಗಿರುತ್ತದೆ. ಲೌಕಿಕ ವ್ಯವಹಾರದ ದಿನ ಬಳಕೆಯ ಮಾತೆಲ್ಲ ಹೀಗೆ. ಅದು ಮನುಷ್ಯನ ಪ್ರಾಣಿಕ ಜೀವನದ ಸಹಜ ಪ್ರೇರಣೆಗಳ ಅಭಿವ್ಯಕ್ತಿಗೆ ಸಾಧನವಾಗಿರುತ್ತದೆ. ಜನಸಾಮಾನ್ಯದ ಮಾತು ಹೀಗೆ ಪ್ರಾಣಿಕವಾದ ಮೆಟ್ಟಲಲ್ಲಿರುವುದು. ಎರಡನೆಯ ಮೆಟ್ಟಲಿನಲ್ಲಿ ಮಾತು ಸ್ವ–ಅನುಭವ, ರಸಾನುಭವ, ಸುವಿಚಾರ–ವಿವೇಕಗಳ ಕನ್ನಡಿಯಾಗುತ್ತದೆ, ಸಿರಿಗನ್ನಡಿಯೂ ಆಗುತ್ತದೆ. ಈ ಸತ್ಯ ಸೌಂದರ್ಯಗಳ ಸಂಮಿಲನದಿಂದ ಉಂಟಾದ ಅಭಿವ್ಯಕ್ತಿಗೆ ಮಾನಸಿಕ ಇಲ್ಲವೆ ಹಾರ್ದಿಕ ಮೆಟ್ಟಲೆಂದು ಕರೆಯಬಹುದು. ಸಾಹಿತಿ–ಕವಿಗಳು ಈ ಮೆಟ್ಟಲಲ್ಲಿರುತ್ತಾರೆ. ಮೂರನೆಯ ಮೆಟ್ಟಲಿನಲ್ಲಿ ಮಾತು ತನ್ನ ಚರಮಸೀಮೆಯನ್ನು ಮುಟ್ಟಿ ಅನಿರ್ವಚನೀಯವಾದ ಅಲೌಕಿಕವಾದ ಅನುಭವ, ಪರತತ್ವಸಂಸ್ಪರ್ಶದಿಂದ ತೆರೆದ ಪ್ರಜ್ಞೆ, ದೈವಿಕಸತ್ಯ ಇವನ್ನು ಮೂಡಿಸಲು ಹೆಣಗುತ್ತದೆ. ಅನುಭಾವಿಗಳೂ ಋಷಿಗಳೂ ಈ ಮೆಟ್ಟಲಲ್ಲಿರುತ್ತಾರೆ. ಇದು ಆಧ್ಯಾತ್ಮಿಕ, ಅತಿಮಾನಸಿಕವಾದ

ಮೆಟ್ಟಿಲೆಂದು ಹೇಳಬಹುದು. ಮೂರೂ ಮೆಟ್ಟಿಲುಗಳು ಪ್ರಾಣ, ಮಾನ, ಆತ್ಮ, ಮನುಷ್ಯನ ಈ ಆಂತರಿಕ ಶಕ್ತಿಗಳ ಅಭಿವ್ಯಕ್ತಿಗಳು. ಅವುಗಳಲ್ಲಿಯ ವಿಕಾಸವನ್ನು ಮಾತು ತನ್ನ ವಿಕಾಸದಲ್ಲಿ ತೋರುತ್ತದೆ. ಒಂದರಲ್ಲಿ ಇನ್ನೊಂದರ ಅಂಶಗಳಿರುತ್ತವೆ. ಒಂದು ವಿಕಾಸ ಗೊಂಡು ಇನ್ನೊಂದರಲ್ಲಿ ವಿಲೀನಗೊಂಡರೂ ಅದರ ಅಂಶಗಳು ಉದಾತ್ತರೂಪವಾಗಿ ಮೇಲಣ ಅವಸ್ಥೆಯಲ್ಲಿ ಉಳಿದೇ ಉಳಿಯುತ್ತವೆ. ಮೂರರಲ್ಲಿ ಮಾತು ಮಾರು ಎಂದರೆ ಮಾರುದನಿ, ಮಾರ್ನುಡಿಯಾಗಿ ಇದ್ದೇ ಇರುತ್ತದೆ. ಪ್ರಾಣಿಕದಲ್ಲಿ ಅದು ಪ್ರಾಣಸ್ಪಂದನಕ್ಕೆ, ಮಾನಸಿಕದಲ್ಲಿ ಮನೋವ್ಯಾಪಾರಕ್ಕೆ, ಆಧ್ಯಾತ್ಮಿಕದಲ್ಲಿ ಆತ್ಮಪ್ರೇರಣೆಗಳಿಗೆ ಮಾರುಗೊಡುತ್ತದೆ. ಈ ಮಾರು ಗೊಡುವಿಕೆ ಎಷ್ಟು ಸಹಜವೋ ಸಮರ್ಪಕವೋ ಅಷ್ಟು ಮಾತು ಸಫಲ.

ನಮ್ಮ ಮಾತು ಒಂದನೆಯ ಮೆಟ್ಟಿಲಿನಿಂದ ಎರಡ ನೆಯದಕ್ಕೆ ಹೋಗಿ ಅನುಭವ, ಸುವಿಚಾರ-ವಿವೇಕಗಳ ಸಹಜ, ಸ್ಪಷ್ಟ ಹಾಗೂ ಸಮರ್ಪಕವಾದ ಸೊಲ್ಲಾಗ ಬೇಕು. ಮಾನಸಿಕನೆಲೆಯಲ್ಲಿ ಈ ಸಿದ್ಧಿಯನ್ನು ಪ್ರಯತ್ನ ಪೂರ್ವಕವಾಗಿ ಸಾಹಿತಿಗಳಂತೂ ಸರಿಯೆ ಎಲ್ಲ ಸುಸಂಸ್ಕೃತರೆನ್ನಿಸಿಕೊಳ್ಳುವವರು ಪಡೆಯಬೇಕು. ಇದಕ್ಕೆ ವಾಙ್ಮಯತಪಸ್ಸು ಅಗತ್ಯ. ಅನುದ್ವೇಗಕರವಾದ ಸತ್ಯಪ್ರಿಯವಾದ ವಾಕ್ಯ ಇದನ್ನು ನಮ್ಮ ಆದರ್ಶ ವಾಗಿಟ್ಟುಕೊಂಡು ನಡೆದರೆ ವಾಙ್ಮಯತಪಸ್ಸಿನ ದಾರಿ ಯಲ್ಲಿ ನಾವು ಮುಂಬರಿಯುತ್ತೇವೆ. ವಾಙ್ಮಯ ತಪಸ್ಸಿನ ಸಿದ್ಧಿಗೆ ಮಾನಸಿಕ ತಪವೂ ಬೇಕು. ಮನಸ್ಸಿನ ಪ್ರಸಾದ, ಸೌಮ್ಯತ್ವ, ಮೌನ, ಆತ್ಮವಿನಿಗ್ರಹ ಈ ಗುಣಗಳನ್ನು ಮಾನಸಿಕ ತಪದ ಲಕ್ಷಣಗಳೆಂದು ಭಗವದ್ಗೀತೆ ಹೇಳಿದೆ. ಅದು ಬಹಳ ಸತ್ಯವಾದ ಮಾತು. ಮನಸ್ಸು ನೇಪಥ್ಯ ಗೃಹ ಎಂದರೆ 'ಗ್ರೀನರೂಮ್' ಇದ್ದಹಾಗೆ, ರಂಗಸ್ಥಲ ವಿದ್ದಂತೆ. ಒಳಗೆ ಕಟ್ಟಿದ ವೇಷ, ಪಳಗಿಸಿಕೊಂಡ ಅಭಿನಯ ಹೊರಗೆ ಬಂದಾಗ ಸೊಗಸುತ್ತದೆ. ಮನಸ್ಸಿಗೆ ವ್ಯವಸ್ಥೆ, ಸಂಸ್ಕರಣ, ನಿಗ್ರಹಗಳು ಬಂದರೇನೇ ಮಾತು ಚೊಕ್ಕಾಗುತ್ತದೆ. ಮೌನವು ಸಹ ಈ ಸಾಧನೆ ಯಲ್ಲಿ ಅವಶ್ಯಕವೆಂದು ಹೇಳಿದ್ದನ್ನು ನೆನೆಯಬೇಕು. ಮೌನವು ನಿಗ್ರಹವನ್ನೂ ಆತ್ಮನಿರೀಕ್ಷಣೆಯನ್ನೂ ಆಂತ ರಿಕ ಪ್ರಜ್ಞೆಯನ್ನೂ ದೊರಕಿಸಿಕೊಡುವ ಸಾಧನವಾಗಿದೆ.

ಈ ಬಗೆಯಾಗಿ ಎರಡನೆಯ ಮೆಟ್ಟಿಲಿನಿಂದ ಮೂರನೆಯ ಮತ್ತು ಅತ್ಯುಚ್ಚ ಸೋಪಾನವನ್ನು ಎಲ್ಲರೂ ಏರಲಾರರು, ಸುಸಂಸ್ಕೃತರೂ ಸಹ. ಇಲ್ಲಿ ಮಾತು ನನ್ನದಲ್ಲ, ಆತನದು ಆಗುತ್ತದೆ, ಪರತತ್ತ್ವದ ಆವಿರ್ಭಾವದ ವಾಹಕ ವಾಗುತ್ತದೆ. ಶ್ರುತಿ ಎಂದರೆ ಇದೇ ಅರ್ಥ. ದರ್ಶನ ಪುನೀತವಾದ ಆರ್ಷಜೀವಕ್ಕೆ ಕೇಳಿದ ಮಾತೇ ಶ್ರುತಿ. ಅದೇ ಮಿಗಿಲಾದ ಮಾರು, ಅತ್ಯುನ್ನತವಾದದ್ದಕ್ಕೆ ಮಾರುನುಡಿ ಇಂಥಲ್ಲಿ ಮಾತೆಂದರೆ ಪರಮಾತ್ಮನ ಸಚ್ಚಿದಾನಂದದ ಸಮಗ್ರ ಆವಿಷ್ಕಾರ, ಜ್ಯೋತಿರ್ಲಿಂಗ ವೆಂದರೆ ಪ್ರಕಾಶರೂಪವಾದ ಶಿವನ ಶಬ್ದಾವತಾರ. ದೈವವಾಣಿ, 'ಭಗವದ್ಗಿರಃ' ಎಂದರೆ ಇದೇ. 'ಏಷಾ ದೈವೀವಾಕ್ ಅಭಿವದತಿ ಸ್ತನಯಿತ್ನುಃ ದದದ ಇತಿ' ಎಂಬಲ್ಲಿ ಇದಕ್ಕೆ ನಿದರ್ಶನವಿದೆ. ವೇದೋಪನಿಷತ್ತು ಗಳಲ್ಲಿಯೂ ವಚನ ವಾಙ್ಮಯ–ದಾಸರ ಕೀರ್ತನೆ ಗಳಲ್ಲಿಯೂ ಇದಕ್ಕೆ ದೃಷ್ಟಾಂತಗಳಿವೆ. 'ಮಾತೆಂಬುದು ಜ್ಯೋತಿರ್ಲಿಂಗ, ಸ್ವಯವೆಂಬುದು ಪರತತ್ವ, ತಾಳೋಷ್ಟ ಸಂಪುಟವೆಂಬುದು ನಾದಬಿಂದು ಕಳಾತೀತ, ಗುಹೇ ಶ್ವರನ ಶರಣರು ನುಡಿದು ಸೂತಕಿಗಳಲ್ಲ ಕೇಳಾ ಮರುಳೆ' ಎಂಬ ಪ್ರಭುದೇವರ ವಾಣಿ ಮಾತಿನ ಪರಮಸಿದ್ಧಿಯನ್ನು ಸಾರುತ್ತದೆ, ಮಾತು ಮಂತ್ರಪದವಿಗೆ ಏರಿದ್ದನ್ನು ತಿಳಿಸು ತ್ತದೆ.

ಮಾತೆಂಬುದು ಜ್ಯೋತಿರ್ಲಿಂಗ— ಇದು ಉನ್ನತ ಸಿದ್ಧಿ. ನಮಗೆಲ್ಲ ಇದು ಕಾಣಲು ಅಸಾಧ್ಯ, ಕಣ್ಣು ತೆರೆದು ಕಂಡರೆ ಸುಸಾಧ್ಯ. ಕಣ್ಣು ತೆರೆಯಬೇಕು ಮಾತ್ರ. ಇದಕ್ಕೆ ಉಗ್ರ ತಪಸ್ಸುಬೇಕು. ಇಂದಿನ ನಮ್ಮ ಅಳವಿಯಲ್ಲಿ ಇದು ಬಹು ದೂರದ ಗುರಿ ನಿಜ. ಆದರೆ ನಾವು ಮಾನಸಿಕ ನೆಲೆಯಲ್ಲಿ ಮಾತಿನ ಸಿದ್ಧಿ ಯನ್ನು ಪರಿಶ್ರಮದಿಂದ ಪಡೆಯಬಲ್ಲೆವು, ಅದನ್ನು ಪಡೆಯುತ್ತಿರುವಂತೆ 'ಮಾತೆಂಬುದು ಜ್ಯೋತಿರ್ಲಿಂಗ' ಎಂಬ ಆದರ್ಶವು ನಮ್ಮ ಕಣ್ಣ ಮುಂದಿದ್ದರೆ ನಾವಿದ್ದ ನೆಲೆಯಲ್ಲಿಯೆ ಅದಕ್ಕಿಂತ ಮೇಲ್ನೆಲೆಯ ಪ್ರಕಾಶ ಚ್ಛಾಯೆಗಳು ನಮ್ಮಲ್ಲಿ ಆಗಾಗ ಮೂಡಿ ನಮ್ಮ ಇರುವಿಕೆ ಯನ್ನೂ ನಮ್ಮ ಮಾತನ್ನೂ ಸಾರ್ಥಕಗೊಳಿಸುತ್ತವೆ, ಆದರ್ಶದತ್ತ ತಮ್ಮ ಆಕರ್ಷಣೆಯಿಂದ ನಮ್ಮನ್ನು ಮುಂದೆ ಕರೆದೊಯ್ಯುತ್ತವೆ.



# ಸಾಹಿತ್ಯ ಸಂಶೋಧನ ಒಂದು ಅಪೂರ್ವ ಷಟ್ಪದಿ

ಶ್ರೀ ದೇಸಾಯಿ ಪಾಂಡುರಂಗರಾಯರು, ಎಂ.ಎ., ನೀಲಗಿರಿ

ಧಾರವಾಡ ಜಿಲ್ಲೆಯ ಅಮ್ಮಿಭಾವಿ ಗ್ರಾಮದ ಜೈನ ಬಸ್ತಿಯ ಭಾವಣಿಯಲ್ಲಿ ಕಟ್ಟಿದ ಒಂದು ಶಿಲಾಶಾಸನದಲ್ಲಿ ಅಪೂರ್ವವಾದ ಒಂದು ಷಟ್ಪದಿ ಪದ್ಯವು ಕಾಣಿಸಿಕೊಳ್ಳುತ್ತದೆ. ಈ ಶಾಸನವು[೧] ಚಾಲುಕ್ಯ ಆರ್ವಡಿ ವಿಕ್ರಮಾದಿತ್ಯನ ಆಳಿಕೆಯದು. ಇದರ ಕಾಲ ಸ್ಥೂಲವಾಗಿ ಕ್ರಿ. ವ. ೧೦೭೧. ಈ ಶಾಸನದಲ್ಲಿ ವಿಕ್ರಮಾದಿತ್ಯನ ಸಾಮಂತನಾದ ಕಾದಂಬ ಜಯಕೇಸಿ, ಅಮ್ಮಿನಭಾವಿಯ ಮಹಾರಾಜರು, ಮುಂತಾದ ವಸ್ತುಗಳ ವರ್ಣನೆ ಬರುತ್ತದೆ. ಅಲ್ಲಲ್ಲಿ ವಚನ, ಕಂದ, ಮುಂತಾಗಿ ರಚನಾಭೇದಗಳನ್ನು ವಿಂಗಡಿಸಿ ಹೇಳಿದೆ. ಬಳಿಕ ಷಟ್ಪದ ಎಂದು ನಾವು ನಿರ್ದೇಶಮಾಡಿ ಒಂದು ಪದ್ಯವನ್ನು ಒಕ್ಕಣಿಸಿದೆ. ಈ ಭಾಗದಲ್ಲಿ ಶಾಸನವು ಸವೆದುಹೋದುದರಿಂದ ಈ ಷಟ್ಪದ ಪದ್ಯವನ್ನು ಸಮಗ್ರವಾಗಿ ಓದಲು ಸಾಧ್ಯವಾಗಿಲ್ಲ. ಆದರೂ ಉಪಲಬ್ಧ ಭಾಗದಿಂದ ಅದರ ಲಕ್ಷಣವನ್ನು ಗುರುತಿಸಬಹುದಾಗಿದೆ. ಒಂದು ಅಕ್ಷರವನ್ನು ಸರಿಪಡಿಸಿಕೊಂಡು ಓದಿದರೆ ಆ ಪದ್ಯವು ಹೀಗೆ ಆಗುತ್ತದೆ.

ಹರ ಪಾದಾಂಬುಜ ಭೃಂಗಂ
ಪರನಾರೀ ಜನ ದೂರಂ
. . . . . . . . . . .
. . . . . ಜಾತ ರೂಪಂ
ಸರಸತಿಗಣಭಕ್ತಂ [ತಾಂ]
ನರಸಮ್ಮಂ ನೆಗರ್ದನೀಧರೆಗೆಲ್ಲಂ ‖

ಈ ಪದ್ಯದಲ್ಲಿ ನರಸಮ್ಮ ಎಂಬ ಪುರುಷ ವ್ಯಕ್ತಿಯನ್ನು ವರ್ಣಿಸಿದೆ. ಈ ಷಟ್ಪದದ ೧-೨ ಮತ್ತು ೫ನೆಯ ಪಾದಗಳಲ್ಲಿ ನಾಲ್ಕು ನಾಲ್ಕು ಮಾತ್ರೆಯ ಮೂರು ಗಣಗಳಿವೆ. ೬ನೆಯ ಪಾದದಲ್ಲಿ ನಾಲ್ಕು ಮಾತ್ರೆಯ ನಾಲ್ಕು ಗಣಗಳಿವೆ. ಈ ವಿಧದಲ್ಲಿ ಖಿಲವಾದ ೪ ಮತ್ತು ೩ನೆಯ ಪಾದಗಳಲ್ಲಿಯೂ ನಾಲ್ಕು ಮಾತ್ರೆಯ ೩ ಮತ್ತು ೪ ಗಣಗಳು ಇದ್ದಿರಬೇಕೆಂದು ಇಟ್ಟುಕೊಳ್ಳಬಹುದು.

ಶರಷಟ್ಪದಿಯಲ್ಲಿ ನಾಲ್ಕು ಮಾತ್ರೆಯ ಗಣಗಳೇನೋ ಇರುತ್ತವೆ. ಆದರೆ ಅದರ ೧-೨ ಮತ್ತು ೪-೫ ಈ ಲಘು ಪಾದಗಳಲ್ಲಿ ಇಂತಹ ಎರಡು ಗಣಗಳಿಗೆ ಮಾತ್ರ ಅವಕಾಶವಿದೆ. ೩ ಮತ್ತು ೬ನೆಯ ಪಾದಗಳಲ್ಲಿ ಇಂತಹ ಮೂರು ಗಣಗಳು ಬರುತ್ತಿದ್ದು ಮೇಲೊಂದು ಗುರುವೂ ಸೇರಬೇಕಾಗುತ್ತದೆ. ಇಮ್ಮಡಿಸಿದ ಶರ ಷಟ್ಪದಿ ಪರಿವರ್ಧಿನಿಯಾಗುತ್ತದೆ. ಹೀಗೆ ಇದುವರೆಗೆ ಜ್ಞಾತವಾಗಿರುವ ಯಾವ ಷಟ್ಪದಿಯ ಗಣನಿಯಮಗಳೂ ಪ್ರಸ್ತುತ ಷಟ್ಪದಿಗೆ ಅನ್ವಯಿಸುವುದಿಲ್ಲ. ಆದುದರಿಂದ ಇದೊಂದು ಅಪೂರ್ವ ಕೃತಿಯೆಂದೇ ಹೇಳಬೇಕು.

ಈಗ ನಾವು ತಿಳಿದಂತೆ ಷಟ್ಪದಿಯ ಲಘುಪಾದಗಳಲ್ಲಿ ವಿಷಮಸಂಖ್ಯೆಯ ಗಣಗಳು ಒಪ್ಪುವುದಿಲ್ಲ. ಶರ, ಕುಸುಮ, ಭೋಗಾದಿ ಷಟ್ಪದಿಗಳಲ್ಲಿ ಬೇರೆ ಬೇರೆ ಮಾತ್ರಾಸಂಖ್ಯೆಯ ಎರಡು ಇಲ್ಲವೆ ನಾಲ್ಕು ಗಣಗಳು ಮಾತ್ರ ಕಂಡುಬರುತ್ತವೆ. ಆದರೆ ಮೊದ ಮೊದಲು ಷಟ್ಪದಿಯ ಆರಂಭ ದಶೆಯಲ್ಲಿ ಲಘುಪಾದಗಳಲ್ಲಿ ಭಿನ್ನ ಮಾತ್ರೆಯ ೩ ಇಲ್ಲವೆ ೫ ಗಣಗಳನ್ನು ಬಳಸಿ ನೋಡುವ ಪ್ರಯೋಗಗಳು ನಡೆದಿರಬೇಕು ಎನ್ನುವುದಕ್ಕೆ ಸೂಚನೆಗಳು ಸಿಕ್ಕುತ್ತವೆ. ಇಂತಹ ಒಂದು ಸೂಚನೆ ಈಮೇಲಿನ ಷಟ್ಪದಿಯೆಂದು ಎಣಿಸಬಹುದು. ಇನ್ನೊಂದು ಸೂಚನೆ ರಾಘವಾಂಕನ ವೀರೇಶಚರಿತೆಯದು.

ವೀರೇಶಚರಿತೆಯಲ್ಲಿ ಬಳಸಿದ ಷಟ್ಪದಿಯ ಲಘುಪಾದಗಳಲ್ಲಿ ಒಟ್ಟು ಮಾತ್ರೆಗಳ ಸಂಖ್ಯೆ ವಾರ್ಧಕದಷ್ಟೇ ಆಗಿದೆ. ಆದರೆ ಗಣವಿನ್ಯಾಸವು ಮಾತ್ರ ವ್ಯತ್ಯಸ್ತವಾಗಿದೆ; ೫ ಮಾತ್ರೆಯ ೪ ಗಣಗಳ ಸ್ಥಳದಲ್ಲಿ ೪ ಮಾತ್ರೆಯ ಐದು ಗಣಗಳು ಬರುತ್ತವೆ. ಈ ದೃಷ್ಟಿಯಿಂದ ಪ್ರಸ್ತುತ ಷಟ್ಪದಿಯ ಅಪೂರ್ವತೆ ಇನ್ನಷ್ಟು ಹೆಚ್ಚುತ್ತದೆ. ಇಲ್ಲಿ ಲಕ್ಷಿಸಬೇಕಾದ ಇನ್ನೊಂದು ಅಂಶವೆಂದರೆ, ದೀರ್ಘಪಾದವು ಲಘುಪಾದದ ಒಂದೂವರೆಯಷ್ಟು, ಮೇಲೊಂದು ಗುರು—ಎಂಬೀ ನಿಯಮಕ್ಕೆ ಇದು ಹೊರತಾಗಿರುವುದು. ಈ ಷಟ್ಪದಿಯ ಕಾಲವು ರಾಘವಾಂಕನ ಕಾಲಕ್ಕಿಂತ ಸುಮಾರು ಒಂದೂಕಾಲು ಶತಮಾನದಷ್ಟು ಪ್ರಾಚೀನವಾಗುತ್ತದೆ, ಎಂಬ ವಿಷಯವಾದರೂ ವಿಚಾರಣೀಯವಾಗಿದೆ.[೨]

೧ Madras Epigraphic Collection, No. 431 of 1925-26.

೨ ಈ ಮತ್ತು ಇಂತಹ ಇನ್ನೂ ಹಲವಾರು ಪ್ರಮೇಯಗಳನ್ನು ಮುದ್ರಣಕ್ಕೆ ಸಿದ್ಧವಾಗಿರುವ ಶಾಸನಚಂಪೂ ಎಂಬ ನನ್ನ ಗ್ರಂಥದ ಮುನ್ನುಡಿಯಲ್ಲಿ ವಿಮರ್ಶಾಪೂರ್ವಕವಾಗಿ ಚರ್ಚಿಸಿದ್ದೇನೆ.




# ಭ್ರಾಂತಿ ವಿನೋದ

(The Comedy of Errors)

(ಜನವರಿ ಸಂಚಿಕೆಯಿಂದ ಮುಂದರಿಸಿದುದು)

ಆಸ್ಥಾನ ವಿದ್ವಾನ್, ಶ್ರೀ ಬೆಳ್ಳಾವೆ ನರಹರಿಶಾಸ್ತ್ರಿ.

ಅವನು ಮನೆಗೆ ಹೋಗಿ ಬೀಗದ ಕೈಯನ್ನು ಕೊಟ್ಟು ವಿಚಾರವನ್ನು ತಿಳಿಸಿದ ಕೂಡಲೆ ಎಡ್ರಿಯಾನಳು ಹಣವನ್ನು ಕೊಟ್ಟಳು. ಅದನ್ನು ತರುತ್ತಿರುವಾಗ ದಾರಿಯಲ್ಲಿ ಸೈರಕ್ಯೂಸಿನ ಆಂಟಿಫೋಲಸನು (ಅವನ ಸ್ವಂತಯಜಮಾನನು) ಸಂಧಿಸಿದನು. ಈವರೆಗೆ ಆ ಊರಲ್ಲಿ ಅಲ್ಲಲ್ಲಿ ಸಂಧಿಸಿದ ಆಶ್ಚರ್ಯ ವಿಷಯಗಳಿಂದ ಅವನಿಗೆ ದಿಕ್ಕೇ ತೋಚದಂತಾಯಿತು. ಇವನ ಸೊದರನು ಆವೂರಿನಲ್ಲಿ ಪ್ರಸಿದ್ಧನಾಗಿದ್ದ ಕಾರಣ ಇವನನ್ನು ನೋಡಿ ಅವನೆಂದು ತಿಳಿದು ಬಹುಕಾಲದಿಂದ ತಮಗೆ ಪರಿಚಿತನಾದವನಂತೆ ಇವನಿಗೆ ನಮಸ್ಕಾರವನ್ನು ಮಾಡದಿದ್ದವರೇ ಇಲ್ಲ. ಕೆಲವರು ಇವನಿಗೆ ತಾವು ಕೊಡಬೇಕಾದ ಸಾಲವೆಂಬುದಾಗಿ ಹಣವನ್ನು ಕೊಡಲು ಬಂದರು. ಮತ್ತೆ ಕೆಲವರು ಇವನನ್ನು ತಮ್ಮ ಮನೆಗಳಿಗೆ ಬರಬೇಕೆಂದು ಕರೆದರು. ಇನ್ನೂ ಕೆಲವರು ಇವನು ತಮಗೆ ಮಹೋಪಕಾರ ಮಾಡಿದವನೆಂದು ವಂದಿಸಿ ಗೌರವಿಸಿದರು. ಒಬ್ಬ ದರ್ಜಿಯವನು ಇವನ ಬಳಿಗೆ ಕೆಲವು ರೇಷ್ಮೆಯ ಬಟ್ಟೆಗಳನ್ನು ತಂದು ತೋರಿಸಿ, ಇವನ ಅಪ್ಪಣೆ ಮೇರೆಗೆ ತಾನು ಅವುಗಳನ್ನು ತಂದೆನೆಂತಲೂ, ಇವನಿಗೆ ಹೊಲಿಸಬೇಕಾಗಿರುವ ಬಟ್ಟೆಗಳಿಗಾಗಿ ಅಳತೆಗಳನ್ನು ಕೋಡಬೇಕೆಂತಲೂ ಇವನನ್ನು ಬಲಾತ್ಕರಿಸಿದನು.

ಈ ವಿಚಿತ್ರಗಳನ್ನೆಲ್ಲ ನೋಡಿದ ಸೈರಕ್ಯೂಸಿನ ಆಂಟಿಫೋಲಸನು, ತಾನು ಇಲ್ಲಿ ಮಾಟಗಾರರು, ಮಾಯಾಕಾರರೂ ಮಂತ್ರವಾದಿಗಳೂ ಆದ ಜನರ ಮಧ್ಯದಲ್ಲಿ ಸಿಕ್ಕಿಬಿದ್ದಿರುವೆನೆಂಬುದಾಗಿ ಆಲೋಚಿಸಿಕೊಂಡು ಬರುತ್ತಿದ್ದನು. ಇವನಿಗೆ ಸಂಧಿಸಿದ ಇವನ ಸ್ವಂತ ಸೇವಕನಾದ ಡ್ರೋಮಿಯನು ಸಹ ಇವನ ಸಂದೇಹ ನಿವಾರಣೆಗೆ ತಕ್ಕಂತೆ ಮಾತನಾಡಲಿಲ್ಲ. ಅವನು ಇವನನ್ನು ನೋಡಿದೊಡನೆಯೋ ಹಣದ ಚೀಲವನ್ನು ತೋರಿಸಿ.

ಸೈ-ಡ್ರೋಮಿಯೊ- ಸ್ವಾಮಿ, ಇದೋ ತಂದೆ. ಹಣವನ್ನು ತೆಗೆದುಕೊಳ್ಳಿ. ಅಧಿಕಾರಿಯ ಕೈಯಿಂದ ಹೇಗೆ ಬಿಡಿಸಿಕೊಂಡು ಬಂದಿರಿ?

ಸೈ-ಆಂಟಿಫೋಲಸ್ - ಎಲವೋ! ಈ ಹಣವು ಯಾವುದು? ಅಧಿಕಾರಿಯಾರು? ಏನುಕಥೆ? ನಿನ್ನ ಮಾತೊಂದೂ ನನಗರ್ಥವೇ ಆಗದಲ್ಲವೋ!

ಸೈ-ಡ್ರೋಮಿಯೋ-ಇದೇನು ಸ್ವಾಮಿ ಹೀಗೆ ಹೇಳುತ್ತೀರಿ? ಯಾವುದೋ ಹಣವನ್ನು ನೀವು ಕೊಡದೆ ಇದ್ದುದಕ್ಕಾಗಿ ಜಾಮೀನು ಕೊಟ್ಟು ಬಿಡಿಸಿಕೊಳ್ಳಲು ಹಣವನ್ನು ತರಬೇಕೆಂದು ನೀವು ನನ್ನ ಕೈಗೆ ಬೀಗದಕೈಯನ್ನು ಕೊಟು, ಆ ಎಡ್ರಿಯಾನಳ ಮನೆಗೆ ಹೋಗಿ ಕೇಳಿತರುವಂತೆ ನನ್ನ ಸಂಗಡ ಹೇಳಿ ಕಳುಹಿಸಲಿಲ್ಲವೆ? ಇನ್ನೂ ಸ್ವಲ್ಪ ಹೋತ್ತಿನ ಮುಂಚೆಯೇ ನಡೆದ ಕಥೆಯಲ್ಲವೇ ಇದೆಲ್ಲವೂ?

ತನಗೆ ಸಂಬಂಧವೇ ಇಲ್ಲದ ಈ ಭಾಷಣವನ್ನು ಕೇಳಿ (ಸೈ) ಆಂಟಿಫೋಲಸನಿಗೆ ದಿಕ್ಕೇ ತೋರದಂತಾಯಿತು. ಆಗ ಅವನು, "ಅಯ್ಯೋ! ಈ ಡ್ರೋಮಿಯನ ಬುದ್ಧಿಯನ್ನೂ ಇಲ್ಲಿನವರು ಕೆಡಿಸಿಬಿಟ್ಟಿದಾರೆ. ಈಗ ನಾವಿಬ್ಬರೂ ಮಾಯಾ ಪ್ರಪಂಚದಲ್ಲಿ ಸಿಕ್ಕಿ ತೊಳಲುತ್ತಿದ್ದೇವೆ! ಅಯ್ಯೋ! ದೇವರೇ! ಯಾವುದಾದರೂ ದೈವಿಕ ಶಕ್ತಿಯು ನಮ್ಮನ್ನು ಈ ಮಾಯೆಯಿಂದ ತಪ್ಪಿಸಿ ಕಾಪಾಡ ಬಾರದೆ!" ಎಂಬದಾಗಿ ಭಯಭ್ರಾಂತನಾಗಿ ಕೂಗಿಕೊಂಡನು.

ಇಷ್ಟುಹೊತ್ತಿಗೆ ಮತ್ತೊಂದು ನೂತನ ವ್ಯಕ್ತಿಯು ಅವನ ಬಳಿಗೆ ಬಂದಿತು. ಅದು ಸ್ತ್ರೀ ವ್ಯಕ್ತಿ. ಅವಳು ಅವನನ್ನು ನೋಡಿ, "ಓಹೋ! ಆಂಟಿಫೋಲಸ್, ನೀನು ನನಗೆ ಇಲ್ಲಿಯೇ ಸಂಧಿಸಿದ್ದು ಬಹಳ ಸಂತೋಷ. ಅಕ್ಕಸಾಲಿಗನನ್ನು ನೋಡಿದ್ದೆಯಷ್ಟೆ! ಈ ದಿನ ನಾವು ಜೊತೆಯಲ್ಲಿ ಊಟಕ್ಕೆ ಕುಳಿತಿದ್ದಾಗ, ನೀನು ನನಗೆ ತಂದುಕೊಡುವುದಾಗಿ ಮಾತುಕೊಟ್ಟಿದ್ದ ಸ್ವರ್ಣಹಾರವನ್ನು ತಂದೆಯಾ?" ಎಂದಳು. ಈ ಮಾತುಗಳನ್ನು ಕೇಳಿ ಆಂಟಿಫೋಲಸನಿಗೆ ಕೋಪವು ಮೇರೆಮೀರಿತು.

ಸೈ। ಆಂಟಿಫೋಲಸ್—ಛೀ ಪಿಶಾಚೀ, ದೂರ ಹೋಗು. ನಾನು ನಿನ್ನ ಜೊತೆಯಲ್ಲಿ ಊಟಮಾಡಿದನೆಂದು ಹೇಳುವೆಯಾ? ಮಾಟಗಾತೀ ಹೋಗು ಆಚೆ! ಹುಂ! ತೊಲಗು.

ಸ್ತ್ರೀ—ಈ ದಿನ ಭೋಜನ ಮಾಡುವಾಗ ನೀನು ನನ್ನಿಂದ ತೆಗೆದುಕೊಂಡ ನನ್ನ ಉಂಗುರವನ್ನು ನನಗೆ ಕೊಟ್ಟುಬಿಡು. ಇಲ್ಲವಾದರೆ ನೀನು ಮಾತು ಕೊಟ್ಟಂತೆ ಆ ಸುವರ್ಣಮಾಲಿಕೆಯನ್ನು ಕೊಟ್ಟುಬಿಡು, ನಾನು ಹೊರಟು ಹೋಗುವೆನು. ನೀನು ನನಗೆ ಮೋಸಮಾಡುವುದಿಲ್ಲವಷ್ಟೆ?

ಸೈ। ಆಂಟಿಫೋಲಸ್—ಛೀ ! ಮೋಸಗಾತಿ ! ನಾನು ನಿನ್ನ ಮನೆಯಲ್ಲಿ ಯಾವಾಗ ಊಟ ಮಾಡಿದೆನೇ ? ಮಾಯೆಗಾತೀ! ಸುಮ್ಮನೆ ತೊಲಗಿ ಹಾಳಾಗಿಹೋಗು—ಡ್ರೊಮಿಯೋ ಬಾ ನಾವು ಹೊರಟುಹೋಗೋಣ.

ಎಂಬದಾಗಿ ಆಂಟಿಪೋಲಸನು ಸೇವಕನೊಡನೆ ಬಿರಬಿರನೆ ಹೊರಟು ಹೋದನು. ಆ ಹೆಂಗಸೂ ಸಹ ಇತರರಂತೆಯೇ ಸೈರಕ್ಯೂಸಿನ ಆಂಟಿಫೋಲಸನನ್ನು ನೋಡಿ ತನ್ನ ಪರಿಚಿತನಾದ ಈಫೊಸಸ್ಸಿನ ಆಂಟಿಫೋಲಸನೆಂದು ಭ್ರಾಂತಳಾಗಿ ಅವನಿಗೂ ತನಗೂ ನಡೆದಿದ್ದ ಸಂಭಾಷಣೆಯನ್ನು ಕುರಿತು ಇವನೊಡನೆ ಮಾತನಾಡಿದಳು.

ಆ ದಿನ ಮಧ್ಯಾಹ್ನದಲ್ಲಿ ಈಫೊಸಸಿನ ಆಂಟಿಫೋಲಸನು ಭೋಜನಕ್ಕೆಂದು ಮನೆಗೆ ಹೋದಾಗ ತನ್ನ ಹೆಂಡತಿಯು ತನಗೆ ಬಾಗಿಲನ್ನು ತೆಗೆಯದೆ ಹೋದುದಕ್ಕಾಗಿ ಅವನು ರೇಗಿ ಕಿಡಿ ಕಿಡಿಯಾಗಿ ಹೊರಟು ಹೋದನಷ್ಟೆ! ತನ್ನ ಹೆಂಡತಿಯು ಆಗಾಗ ತನ್ನನ್ನು ಪರಸ್ತ್ರೀಯರ ಸ್ನೇಹ ಮಾಡಿಕೊಂಡಿರುವನೆಂದು ನಿಷ್ಕಾರಣವಾಗಿ ದೂರುತ್ತ ಬಹಳ ಅಸೂಯೆಯಿಂದ ವರ್ತಿಸುತ್ತಿದ್ದಳಾದ ಕಾರಣ ಆ ಅಸೂಯೆಯಿಂದಲೇ ತನಗೆ ಬಾಗಿಲನ್ನು ತೆರೆಯಲಿಲ್ಲವೆಂದು ಅವನು ಊಹಿಸಿ ಅವಳಿಗೆ ತಕ್ಕುದನ್ನು ಮಾಡಬೇಕೆಂದು ಹೊರಟು ಈ ಹೆಂಗಸಿನ ಮನೆಗೆ ಭೋಜನ ಮಾಡಲು ಹೋದನು. ಇವಳು ಅವನನ್ನು ಬಹಳ ಮರ್ಯಾದೆಯಿಂದ ಸ್ವಾಗತಿಸಿ ಉಪಚರಿಸಿದಳು. ತನ್ನ ಹೆಂಡತಿಯು ತನಗೆ ಹಾಗೆ ಅವಮಾನ ಮಾಡಿ ಕೆರಳಿಸಿರುವ ಸಮಯದಲ್ಲಿ ತನ್ನನ್ನು ಕೇವಲ ಗೌರವದಿಂದ ಕಂಡು ಉಪಚರಿಸಿದ ಈ ಹೆಂಗಸಿಗೆ ತಾನು ಬಹುಮಾನ ಮಾಡಬೇಕೆಂದು ಸಂಕಲ್ಪಿಸಿ ಈಫೊಸಸ್ಸಿನ ಆಂಟಿಫೋಲಸನು ತನ್ನ ಹೆಂಡತಿಗಾಗಿ ಮಾಡಿಸಲು ಗೊತ್ತುಮಾಡಿದ್ದ ಸುವರ್ಣಮಾಲಿಕೆಯನ್ನು ಇವಳಿಗೆ ಕೊಡುವನೆಂಬದಾಗಿ ವಾಗ್ದಾನ ಮಾಡಿದ್ದನು. ಇದೇ ಸುವರ್ಣಮಾಲಿಕೆಯನ್ನೇ ಅಕ್ಕಸಾಲಿಗನು ಇವನಿಗೆ ಕೊಡುವದಕ್ಕೆ ಪ್ರತಿಯಾಗಿ ಭ್ರಾಂತಿಯಿಂದ ಇವನ ಸೋದರನಿಗೆ ಕೊಟ್ಟುಬಿಟ್ಟನು. ಆ ಹೆಂಗಸಿಗೆ ಸ್ವರ್ಣಹಾರವನ್ನು ಧರಿಸಿಕೊಳ್ಳಬೇಕೆಂಬ ಆಸೆ ಬಹಳವಾಗಿದ್ದುದರಿಂದ ತನ್ನ ಉಂಗುರವೊಂದನ್ನು ಆ ಮೂರಿನ ಆಂಟಿಫೋಲಸನಿಗೆ ಕೊಟ್ಟಿದ್ದಳು. ಈಗ ಅವನ ಸೋದರನಾದ ಆಂಟಿಫೋಲಸನನ್ನು ಭ್ರಾಂತಿಯಿಂದ ಮಾತನಾಡಿಸಿ ಹಾರವನ್ನೂ ಉಂಗುರವನ್ನೂ ಕೇಳಿದುದಕ್ಕೆ ಆತನು ತನಗೆ ಅವಳ ಪರಿಚಯವೇ ಇಲ್ಲವೆಂತಲೂ ಉಂಗುರವನ್ನು ಅವಳು ಕೊಟ್ಟಿದ್ದುದೇ ಸುಳ್ಳೆಂತಲೂ ಹೇಳಿದನು. ಇದನ್ನು ಕೇಳಿ ಅವಳಿಗೆ ಮಿತಿಮೀರಿದ ಕೋಪಬಂದು ಅವನಿಗೆ ಹುಚ್ಚುಹಿಡಿದಿರಬಹುದೆಂದು ತಿಳಿದು ಆ ಕೂಡಲೇ ಎಡ್ರಿಯಾನಳ ಬಳಿಗೆ ಹೋಗಿ 'ನಿನ್ನ ಗಂಡನಿಗೆ ಹುಚ್ಚುಹಿಡಿದಿದೆ' ಎಂಬದಾಗಿ ಹೇಳಿಬಿಡಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಅಲ್ಲಿಗೆ ಹೋದಳು.

ಇತ್ತ ಸೆರೆಮನೆಯ ಬಳಿಯಲ್ಲಿ ಎಷ್ಟು ಹೊತ್ತು ನಿರೀಕ್ಷಿಸಿದರೂ, ಹಣಕ್ಕಾಗಿ ಮನೆಗೆ ಹೋದ ಡ್ರೋಮಿಯೋನು ಹಿಂದಿರುಗಿ ಬಾರದಿದ್ದಕಾರಣ ಈಫೆಸಸಿನ ಆಂಟಿಫೋಲಸನು ಹಣವನ್ನು ತಂದು ಸಾಲವನ್ನು ತೀರಿಸಲು ಅವಕಾಶಕೊಡಬೇಕೆಂದು ಅಧಿಕಾರಿಯನ್ನು ಕೇಳಿಕೊಂಡನು. ಅದರಂತೆ ಅಧಿಕಾರಿಯು ಒಪ್ಪಿ ತಾನೂ ಅವನ ಸಂಗಡಲೇ ಹೊರಟನು. ಇವರಿಬ್ಬರೂ ಮನೆಗೆ ಬರುವ ಹೊತ್ತಿಗೆ ಆ ಹೆಂಗಸು ಬಂದು ಎಡ್ರಿಯಾನಳ ಗಂಡನಿಗೆ ಹುಚ್ಚು ಹಿಡಿದಿರುವುದೆಂದು ಅವಳ ಸಂಗಡ ಹೇಳಿದ್ದಳು. ಈವರೆಗೆ ಎಡ್ರಿಯಾನಳು ಡ್ರೋಮಿಯನ ಕೈಯಲ್ಲಿ ಕೊಟ್ಟು ಕಳುಹಿಸಿದ್ದ ಹಣವನ್ನು ಅವನು ಸೈರಕ್ಯೂಸಿನ ಆಂಟಿಫೋಲಸನ ಕೈಗೆ ಕೊಟ್ಟುಬಿಟ್ಟನು.

ಹೆಂಗಸು ಹೇಳಿದಂತೆ ತನ್ನ ಗಂಡನಿಗೆ ನಿಜವಾಗಿಯೂ ಹುಚ್ಚು ಹಿಡಿದಿರುವುದೆಂದೇ ಎಡ್ರಿಯಾನಳು ಚೆನ್ನಾಗಿ ನಂಬಿದಳು. ಏತಕ್ಕೆಂದರೆ: ಅವನು ಭೋಜನ ಕಾಲದಲ್ಲಿ ತನ್ನ ಗಂಡನೇ ಅಲ್ಲವೆಂದು ವಾದಿಸಿ ತಾನು ಈಫೆಸಸ್ ಪಟ್ಟಣಕ್ಕೆ ಈ ದಿನ ಬಂದೆನೆಂದು ಹೇಳಿದುದೂ, ಅನಂತರ ತಾನು ಭೋಜನಕ್ಕೆಂದು ಮನೆಗೆ ಬಂದಾಗ ತನಗೆ ಬಾಗಿಲನ್ನೇ ತೆರೆಯಲಿಲ್ಲವೆಂದು ಆಕ್ಷೇಪಿಸಿ ರಗಳೆ ಮಾಡಿದುದೂ ಸಹ ಅವಳ ಮನಸ್ಸಿಗೆ ಬಂದು ಆ ನಂಬಿಕೆಯನ್ನು ಅವಳಿಗೆ ಉಂಟುಮಾಡಿದವು. ಇದರಿಂದ ಸೆರೆಮನೆಯ ಅಧಿಕಾರಿಯ ಸಂಗಡ ಆಂಟಿಫೋಲಸನು ಬಂದು ಹಣವನ್ನು ಕೇಳಲು, ಎಡ್ರಿಯಾನಳು ಅಧಿಕಾರಿಯ ಕೈಗೆ ಹಣವನ್ನು ಕೊಟ್ಟು ಗಂಡನನ್ನು

ಬಿಡಿಸಿಕೊಂಡಳು. ಅನಂತರ ಸೇವಕನನ್ನು ಕರೆದು ಹುಚ್ಚು ಹಿಡಿದಿರುವ ತನ್ನ ಗಂಡನನ್ನು ಹಗ್ಗಗಳಿಂದ ಬಿಗಿದು ಕಟ್ಟಿರೆಂದು ಹೇಳಿದನು. ಆಂಟಿಫೋಲಸನು ತನಗೆ ಹುಚ್ಚು ಹಿಡಿದಿಲ್ಲವೆಂತಲೂ ಕಟ್ಟಬೇಡಿರೆಂತಲೂ ಎಷ್ಟು ಕೂಗಿ ಕೇಳಿಕೊಂಡರೂ ಅವರು ಬಿಡದೆ ಅವನನ್ನು ಹಿಂಗಟ್ಟು ಮುಂಗಟ್ಟು ಕಟ್ಟಿ ಯಜಮಾನಿಯ ಅಪ್ಪಣೆಯಂತೆ ಒಂದು ಕತ್ತಲೆಯ ಕೋಣೆಗೆ ಸೇರಿಸಿಬಿಟ್ಟರು. ಎಡ್ರಿಯಾನಳು ಆಕೂಡಲೇ ತನ್ನ ಗಂಡನ ದೇಹಸ್ಥಿತಿಯನ್ನು ಪರೀಕ್ಷಿಸಿ ಅವನ ಹುಚ್ಚನ್ನು ವಾಸಿಮಾಡಲು ವೈದ್ಯರನ್ನು ಕರೆತರುವಂತೆ ಸೇವಕರೊಡನೆ ಹೇಳಿಕಳುಹಿಸಿದಳು. ತನ್ನ ಸೋದರನ ರೂಪಕ್ಕೂ ತನ್ನ ರೂಪಕ್ಕೂ ಲೇಶವೂ ವ್ಯತ್ಯಾಸವಿಲ್ಲದಿದ್ದುದೂ ಅವನು ಈ ನಗರಕ್ಕೆ ಬಂದಿರುವುದೂ ಸಹ ಇಷ್ಟು ಅನರ್ಥಕ್ಕೆ ಕಾರಣವೆಂಬುದು ಈಫೆಸಸ್ಸಿನ ಆಂಟಿಫೋಲಸನಿಗೆ ತಿಳಿಯದು. ಅವನು ಎಷ್ಟೆಷ್ಟು ವಿಧವಾಗಿ ಕೂಗಿ ಪ್ರಾರ್ಥಿಸಿಕೊಂಡರೂ ಅವೆಲ್ಲವೂ ಅವನಿಗೆ ಹುಚ್ಚು ಹಿಡಿದಿರುವುದೆಂಬ ನಂಬಿಕೆಯನ್ನೇ ಆ ಜನರಲ್ಲಿ ಮತ್ತಷ್ಟು ಸ್ಥಿರಪಡಿಸುತ್ತಿದ್ದಿತು. ಇವನ ಸೇವಕನಾದ ಡ್ರೋಮಿಯೋ ತನ್ನ ಯಜಮಾನನಿಗೆ ಹುಚ್ಚು ಹಿಡಿದಿಲ್ಲವೆಂತಲೂ ಆತನ ಮಾತುಗಳೆಲ್ಲವೂ ನಿಜವೆಂತಲೂ ವಾದಿಸಲು, ಅವನಿಗೂ ಹುಚ್ಚು ಹಿಡಿದಿರುವುದೆಂದು ತಿಳಿದು ಅವನನ್ನೂ ಹಗ್ಗಗಳಿಂದ ಕಟ್ಟಿ ಅವನ ಯಜಮಾನನಿದ್ದ ಕಡೆಗೇ ಸೇರಿಸಿಬಿಟ್ಟರು.

ಹೀಗೆ ಎಡ್ರಿಯಾನಳು ತನ್ನ ಗಂಡನನ್ನೂ ಸೇವಕನನ್ನೂ ಬಂಧಿಸಿ ಕತ್ತಲೆಯ ಕೋಣೆಯಲ್ಲಿ ಕೂಡಿದ ಸ್ವಲ್ಪಹೊತ್ತಿನ ಮೇಲೆ, ಒಬ್ಬ ಸೇವಕನು ಬಂದು ಆಂಟಿಫೋಲಸನೂ ಡ್ರೋಮಿಯೋನೂ ಇಬ್ಬರೂ ಕಟ್ಟುಗಳನ್ನು ಹರಿದುಕೊಂಡು ಕಾವಲುಗಾರರಿಗೆ ಸಿಕ್ಕದೆ ತಪ್ಪಿಸಿಕೊಂಡು ಹೋಗಿರಬಹುದೆಂತಲೂ ಅವರಿಬ್ಬರೂ ಆ ಪಕ್ಕದ ಬೀದಿಯಲ್ಲಿ ನಿರಾತಂಕವಾಗಿ ಸಂಚರಿಸುತ್ತಿದ್ದುದನ್ನು ತಾನು ನೋಡಿದೆನೆಂತಲೂ ಹೇಳಿದನು. ಇದನ್ನು ಕೇಳಿ ಎಡ್ರಿಯಾನಳು ಮತ್ತೆ ಗಂಡನನ್ನು ಹಿಡಿದು ಮನೆಗೆ ಕರೆತರಬೇಕೆಂದು ಕೆಲವು ಜನರನ್ನು ಜೊತೆಯಲ್ಲಿ ಕರೆದುಕೊಂಡು ಬೇಗಬೇಗನೆ ಆ ಬೀದಿಗೆ ಹೋದಳು. ಅವಳ ತಂಗಿಯೂ ಅವಳ ಹಿಂದೆಯೇ ಹೊರಟಳು. ಅವರೆಲ್ಲರೂ ಬಳಿಯಲ್ಲಿದ್ದ ಒಂದು ಸನ್ಯಾಸಿನೀ ಮಠದ ಹೆಬ್ಬಾಗಿಲಿಗೆ ಬರುವಷ್ಟರಲ್ಲಿ ಆಂಟಿಫೋಲಸನೂ ಡ್ರೋಮಿಯನೂ ಬೀದಿಯಲ್ಲಿ ಹೋಗುತ್ತಿದ್ದುದನ್ನು ಕಂಡರು. (ಈಗಲೂ ರೂಪಸಾದೃಶ್ಯದಿಂದ ಅವರು ಮೋಸಹೋಗಿ ಅವರಿಬ್ಬರೂ ತಮ್ಮ ಆಂಟಿಫೋಲಸ್ ಮತ್ತು ಡ್ರೋಮಿಯರೆಂದು ಭಾವಿಸಿಕೊಂಡರು)

ಸೈರಕ್ಯೂಸಿನ ಆಂಟಿಫೋಲಸನಿಗೆ ತಾನು ಮಾಟಗಾರರ ಮಧ್ಯದಲ್ಲಿ ಸಿಕ್ಕಿರುವೆನೆಂಬ ಕಳವಳವು ಇನ್ನೂ ತಪ್ಪಿರಲಿಲ್ಲ. ಅಕ್ಕಸಾಲಿಗನು ಕೊಟ್ಟ ಸ್ವರ್ಣಹಾರವು ಅವನ ಕಂಠದಲ್ಲೇ ಇತ್ತು. ಆಗ ಅದೇ ಅಕ್ಕಸಾಲಿಗನೂ ಅವನಿಗೆ ಹಣ ಕೊಟ್ಟಿದ್ದ ವರ್ತಕನೂ ಜೊತೆಯಲ್ಲಿ ಬರುತ್ತ ಇವನನ್ನು ಸಂಧಿಸಿದರು. ಅಕ್ಕಸಾಲಿಗನು ಆಂಟಿಫೋಲಸನನ್ನು ನೋಡಿ, 'ಏನು ಸ್ವಾಮಿ! ಎಲ್ಲಿದೆ ಸ್ವರ್ಣಹಾರ? ಯಾರಿಗೆ ಕೊಟ್ಟೆ? ನೀನು ಆ ಸ್ವರ್ಣಹಾರವನ್ನು ನನಗೆ ತಂದು ಕೊಡುವವರೆಗೂ ನಾನು ನಿನಗೆ ಯಾವ ಹಣವನ್ನೂ ಕೊಡಬೇಕಾಗಿಲ್ಲ.' ಎಂಬದಾಗಿ ಹೇಳಿದಿರಲ್ಲಾ! ಅದು ನ್ಯಾಯವೋ? ಈ ನಿಮ್ಮ ಕೊರಳಲ್ಲಿರುವ ಸುವರ್ಣಹಾರವು ಯಾವುದು?" ಎಂಬದಾಗಿ ಹಂಗಿಸಿ ಆಕ್ಷೇಪಿಸಿದನು. ಅದಕ್ಕೆ ಸೈರಕ್ಯೂಸಿನ ಆಂಟಿಫೋಲಸನು, 'ಇದೇನಯ್ಯಾ ಹೀಗೆ ಹೇಳುವೆ? ಈ ದಿನ ಪ್ರಾತಃಕಾಲ ನೀನು ಈ ಹಾರವನ್ನು ನನಗೆ ಕೊಟ್ಟು ಸುಮ್ಮನೆ ಹೊರಟು ಹೋದೆಯಷ್ಟೆ? ಅದು ಮೊದಲಾಗಿ ಈವರೆಗೂ ನಾನು ನಿನ್ನ ಮುಖವನ್ನೇ ನೋಡಲಿಲ್ಲವಲ್ಲಾ! ಹೀಗಿರುವಲ್ಲಿ ನೀನು ನನ್ನಮೇಲೆ ಇಲ್ಲದ ಸಲ್ಲದ ಆಕ್ಷೇಪಣೆಗಳನ್ನು ಹೊರಿಸುತ್ತಿರುವೆಯಲ್ಲಾ!" ಎಂದನು.

ಇಷ್ಟುಹೊತ್ತಿಗೆ ಎಡ್ರಿಯಾನಳು ಅಲ್ಲಿಗೆ ಬಂದು, ಕಾವಲುಗಾರರಿಗೆ ಸಿಕ್ಕದೆ ತಪ್ಪಿಸಿಕೊಂಡೋಡಿ ಬಂದಿದ್ದ ತನ್ನ ಹುಚ್ಚುಗಂಡನು ಸಿಕ್ಕದನೆಂದು ಹೇಳಲು, ಅವಳ ಜೊತೆಯಲ್ಲಿ ಸಹಾಯಕ್ಕಾಗಿ ಬಂದಿದ್ದ ಜನರು ಸೈರಕ್ಯೂಸಿನ ಆಂಟಿಫೋಲಸನನ್ನೂ ಅಲ್ಲಿದ್ದ ಡ್ರೋಮಿಯೋನನ್ನೂ ಹಿಡಿದು ಚೆನ್ನಾಗಿ ಬಡಿದು ಬಾರಿಸಿ ಸೆಳೆದುಕೊಂಡು ಹೋಗಬೇಕೆಂದು ಓಡಿಬರುವಷ್ಟರಲ್ಲಿ ಅವರಿಬ್ಬರೂ ಅಲ್ಲಿದ್ದ ಸನ್ಯಾಸಿನೀಮಠದೊಳಕ್ಕೆ ಓಡಿಹೋದರು. ಆಂಟಿಫೋಲಸನು ಅಲ್ಲಿದ್ದ ಮಠಾಧ್ಯಕ್ಷೆಳನ್ನು ಕಂಡು ತಮಗೆ ಆ ಮನೆಯಲ್ಲಿ ನಿಲ್ಲಲು ಆಶ್ರಯ ಕೊಡಬೇಕೆಂದು ಬಹಳವಾಗಿ ಬೇಡಿಕೊಂಡನು. ಆಗ ಆ ಮಠಾಧ್ಯೆಳು ಈ ಗದ್ದಲವೇನೆಂದು ವಿಚಾರಿಸುವುದಕ್ಕಾಗಿ ತಾನೇ ಹೊರಗೆ ಬಂದಳು. ಆಕೆಯು ಗಂಭೀರಮುಖಮುದ್ರೆಯ ಪೂಜಾರ್ಹವ್ಯಕ್ತಿಯಾಗಿದ್ದಳು. ತಾನು ನೋಡಿದ ವಿಚಾರಗಳಲ್ಲಿ ನ್ಯಾಯವಿಮರ್ಶೆ

ಮಾಡಬಲ್ಲ ಮೇಧೆಯೂ ಅವಳಿಗಿತ್ತು. ಅಲ್ಲದೆ ತನ್ನ ಮಠಕ್ಕೆ ಬಂದು ರಕ್ಷಣೆ ಬೇಡಿದ ಮನುಷ್ಯನನ್ನು ಆತುರ ಬುದ್ಧಿಯಿಂದ ಬಿಟ್ಟುಕೊಡಲೂ ಆಕೆ ಇಷ್ಟಪಡಲಿಲ್ಲ. ಆದಕಾರಣ ಆಕೆಯು ಎಡ್ರಿಯಾನಳು ಹೇಳಿದ ಅವಳ ಗಂಡನ ಹುಚ್ಚಿನ ವಿಚಾರವಾಗಿ ಕೆಲವು ನಿಷ್ಕೃಷ್ಟವಾದ ಪ್ರಶ್ನೆಗಳನ್ನು ಕೇಳಿ, "ಹೀಗೆ ನಿನ್ನ ಗಂಡನಿಗೆ ಹಠಾತ್ತಾಗಿ ಬುದ್ಧಿಕೆಡಲು ಕಾರಣವೇನು? ಆತನ ಐಶ್ವರ್ಯವೇನಾದರೂ ಸಮುದ್ರದ ಪಾಲಾಯಿತೇ? ಅಥವಾ ಯಾರಾದರೂ ಆತನಿಗೆ ಪರಮಾಪ್ತರಾಗಿದ್ದ ಸ್ನೇಹಿತರ ಮರಣದಿಂದ ಆತನ ಮನಸ್ಸು ಹೀಗೆ ಚಪಲವಾಯಿತೇ?" ಎಂಬದಾಗಿ ಪ್ರಶ್ನೆಮಾಡಿದಳು.

ಇಂತಹ ಪ್ರಸಂಗವು ಯಾವುದೂ ಇಲ್ಲವೆಂದು ಎಡ್ರಿಯಾನಳು ಉತ್ತರ ಕೊಟ್ಟಳು. ಅದಕ್ಕೆ ಆ ವಿರಾಗಿಣಿಯು, "ಹಾಗಾದರೆ ಆತನ ಪ್ರೇಮವು ಸ್ವಂತ ಪತ್ನಿಯಾದ ನಿನ್ನಮೇಲೆ ತಪ್ಪಿ ಮತ್ತೆ ಯಾವಳಾದರೂ ಸ್ತ್ರೀಯ ಕಡೆಗೆ ತಿರುಗಿರುವುದರಿಂದ ಈ ರೀತಿಯಾಗಿರಬಹುದೆ?" ಎಂದು ಕೇಳಿದಳು. ಅದಕ್ಕೆ ಎಡ್ರಿಯಾನಳು, 'ಆತನು ಆಗಾಗ ಮನೆಗೆ ಬಾರದೆ ಇರುತ್ತಿದ್ದುದರಿಂದ ಆತನ ಪ್ರೇಮವು ಮತ್ತೊಬ್ಬ ಸ್ತ್ರೀಯಲ್ಲಿ ನೆಲಸಿರಬಹುದೆಂದು ನಾನು ಬಹಳ ದಿನಗಳಿಂದಲೂ ಆಲೋಚಿಸುತ್ತಿದ್ದೇನೆ' ಎಂದಳು.

ಇದರ ನಿಜಾಂಶವೇನೆಂದರೆ: ಎಡ್ರಿಯಾನಳ ಗಂಡನು ಮನೆಗೆ ಬಾರದೆ ಇರುತ್ತಿದ್ದುದಕ್ಕೆ, ಅವನು ಮತ್ತೊಬ್ಬಳಲ್ಲಿ ಅನುರಕ್ತನಾಗಿದ್ದುದು ಕಾರಣವಲ್ಲ. ಮನೆಗೆ ಬಂದರೆ ಅವನ ಪತ್ನಿಯು ಕೇವಲ ಅಸೂಯಾಸ್ವಭಾವದಿಂದ ಕೆರಳಿ ಅವನನ್ನು ಕಾಡಿಸುತ್ತಿದ್ದುದೇ ಕಾರಣ. ಎಡ್ರಿಯಾನಳು ಬಂದ ಆವೇಶವನ್ನು ನೋಡಿದ್ದ ಮಠಾಧ್ಯಕ್ಷಳು ಗಂಡನ ವಿರಸಕ್ಕೆ ಹೆಂಡತಿಯ ಇಂತಹ ಉರಿಮೋರೆಯೇ ಕಾರಣವೆಂದು ಊಹಿಸಿ, ನಿಜಾಂಶವನ್ನು ತಿಳಿಯಲು ಅವಳನ್ನು ನೋಡಿ, ನೀನು ಇದಕ್ಕಾಗಿ ರೇಗಿ ಆತನನ್ನು ಚೆನ್ನಾಗಿ ಆಕ್ಷೇಪಿಸಬಹುದಾಗಿತ್ತಲ್ಲಾ" ಎಂದಳು.

ಎಡ್ರಿಯಾನ—ಅಯ್ಯೋ! ಎಷ್ಟೆಷ್ಟೋ ಆಕ್ಷೇಪಿಸಿದ್ದಾಯಿತು.

ಮಠಾಧ್ಯಕ್ಷಳು—ಓಹೋ! ಹಾಗಾದರೆ ಅದು ಸಾಲದೆಂದು ತೋರುವುದು.

ಎಂದ ಮಠಾಧ್ಯಕ್ಷಳಿಗೆ ಎಡ್ರಿಯಾನಳು ತಾನು ತನ್ನ ಗಂಡನನ್ನು ಆಕ್ಷೇಪಿಸಿದುದನ್ನು ಮನಮುಟ್ಟುವಂತೆ ಹೇಳಲುದ್ದೇಶಿಸಿ "ಅಮ್ಮಾ, ನಾವು ಮಾತನಾಡುವಾಗಲೆಲ್ಲವೂ ಈ ವಿಚಾರವಲ್ಲದೆ ಬೇರೆ ಪ್ರಸ್ತಾಪವೇ ಇಲ್ಲ. ಮಲಗುವಾಗಲೂ ನಾನು ಇದೇ ವಿಷಯವಾಗಿ ಹೇಳುತ್ತ ಆತನನ್ನು ನಿದ್ರೆಹೋಗಗೊಡಿಸುತ್ತಿರಲಿಲ್ಲ. ಊಟಕ್ಕೆ ಕುಳಿತಾಗಲಂತೂ ಆತನಿಗೆ ತುತ್ತನ್ನೆತ್ತಲವಕಾಶವಿಲ್ಲದಂತೆ ಇದೇ ವಿಚಾರವಾಗಿಯೇ ಹೇಳಿ ಹೇಳಿ ನನಗೆ ಸಾಕಾಯಿತು. ನಾನು ಆತನೊಡನೆ ಒಂಟಿಯಾಗಿದ್ದಾಗಲಂತೂ ಇದಲ್ಲದೆ ಬೇರೆ ವಿಷಯವನ್ನೇ ಕುರಿತು ಮಾತನಾಡುತ್ತಿರಲಿಲ್ಲ. ಯಾರಾದರೂ ಜೊತೆಯಲ್ಲಿದ್ದರೆ ಇದೇ ವಿಚಾರವಾಗಿ ಆತನ ಮನಸ್ಸಿಗೆ ಅರ್ಥವಾಗುವಂತೆ ಪದೇ ಪದೇ ಸೂಚನೆಗಳನ್ನು ಕೊಡುತ್ತಲೇ ಇದ್ದೆನು. ಇಷ್ಟಾದರೂ ಆತನು ನನಗಿಂತಲೂ ಹೆಚ್ಚಾಗಿ ಮತ್ತೊಬ್ಬಳನ್ನು ಪ್ರೀತಿಸಬೇಕಾದರೆ ನನ್ನ ಮಾತುಗಳೆಲ್ಲವನ್ನೂ ಎಷ್ಟು ಕಟುವಾಗಿಯೂ ತುಚ್ಛವಾಗಿಯೂ ಭಾವಿಸಬಹುದು!" ಎಂದಳು.

ಹೀಗೆ ಅಸೂಯಾಪರಳಾದ ಎಡ್ರಿಯಾನಳಿಂದಲೇ ಅವಳ ಅವಿವೇಕದ ನಡವಳಿಕೆಯ ವಿವರಗಳೆಲ್ಲವನ್ನೂ ಹೇಳಿಸಿ ಮಠಾಧ್ಯಕ್ಷಳು ಅವಳನ್ನು ನೋಡಿ, "ಹಾಗಾದರೆ ಈ ಕಾರಣಗಳಿಂದಲೇ ಆತನು ಹುಚ್ಚನಾಗಿರಬೇಕು. ಅಸೂಯಾಪರಳಾದ ಸ್ತ್ರೀಯ ವಿಷಮಯವಾದ ಗಲಭೆಯು, ಹುಚ್ಚುನಾಯಿಯ ಹಲ್ಲುಗಳ ವಿಷಕ್ಕಿಂತಲೂ ಅತಿ ಭೀಕರವಾದದ್ದು. ನಿನ್ನ ಗದ್ದಲದಿಂದ, ಪಾಪ! ಆತನಿಗೆ ನಿದ್ದೆಮಾಡಲವಕಾಶವಿಲ್ಲವಾಯಿತು. ಆದ್ದರಿಂದ ಆತನ ಬುದ್ಧಿಕೆಡುವುದೇನಾಶ್ಚರ್ಯ! ಆತನ ಊಟಕ್ಕೆ ನಿನ್ನ ಹಂಗಣೆಯ ಒಗ್ಗರಣೆಯನ್ನು ನೀನು ಹಾಕದೆ ಬಿಡುತ್ತಲೇ ಇರಲಿಲ್ಲ. ಮನಶ್ಶಾಂತಿಯಿಲ್ಲದ ಊಟದಿಂದ ಆಹಾರವು ಸರಿಯಾಗಿ ಜೀರ್ಣಿಸುವುದಿಲ್ಲ. ಆದರಿಂದ ಆತನ ಮೆದುಳು ಹೀಗೆ ಜ್ವರಪೀಡಿತವಾಗಿರುವದು. ನಿನ್ನ ಜಗಳದಿಂದ ಆತನ ವಿನೋದಗಳೆಲ್ಲಕ್ಕೂ ಭಂಗಬಂತೆಂದು ನೀನೇ ಹೇಳಿದೆ. ಹೀಗೆ ಪ್ರಿಯ ಸಹವಾಸವೂ ಮನಸ್ಸಿಗೆ ವಿನೋದವೂ ಇಲ್ಲದೆಯೇ ಹೋದರೆ ಆಗುವುದಿನ್ನೇನು? ಬುದ್ಧಿವಿಕಲ್ಪವೂ ಸುಖದಲ್ಲಿ ನಿರಾಶೆಯೂ ಮಂಕುತನವೂ ಬಂದೇ ಬರುವುವು. ಒಟ್ಟಿನಲ್ಲಿ ಅಸೂಯೆಯ ದುರಾಗ್ರಹ ಭಾಷಣಗಳ ಫಲವೇ ನಿನ್ನ ಗಂಡನಿಗೆ ಹುಚ್ಚು ಹಿಡಿಸಿರುವುದು" ಎಂದಳು.

ಆಗ ಲೂಸಿಯಾನಳು ತನ್ನ ಅಕ್ಕನನ್ನು ನೋಡಿ "ಅಕ್ಕಾ, ಉತ್ತರವನ್ನೇ ಹೇಳದೆ ಆಕ್ಷೇಪಣೆಗಳನ್ನು ಕೇಳಿಕೊಂಡು ಏತಕ್ಕೆ ಸುಮ್ಮನಿದ್ದೀಯೆ?" ಎಂದಳು.

ಮಠಾಧ್ಯಕ್ಷಳು ತನ್ನ ಭಾಷಣದಿಂದ ಎಡ್ರಿಯಾನಳಿಗೆ ಅವಳ ತಪ್ಪಿತವು ಚೆನ್ನಾಗಿ ಮನಗಾಣುವಂತೆ ಮಾಡಿದ್ದುದರಿಂದ ತನ್ನ ತಂಗಿಯೂ ತನಗೆ ಹಿತಕರವಾಗಿ ಮಾತನಾಡಲಿಲ್ಲವೆಂಬುದಾಗಿ ಎಡ್ರಿಯಾನಳು ತಿಳಿದುಕೊಂಡಳು. ತನ್ನ ನಡತೆಯು ಸರಿಯಲ್ಲವೆಂದು ಎಡ್ರಿಯಾನಳಿಗೆ ಮನಗಂಡು ನಾಚಿಕೆಯುಂಟಾಗಿದ್ದರೂ ಅವಳು ತನ್ನ ಗಂಡನನ್ನು ಬಿಟ್ಟುಕೊಡಲೇಬೇಕೆಂದು ಹಠ ಹಿಡಿದಳು. ಆ ನೊಂದ ಮನುಷ್ಯನನ್ನು, ಅಸೂಯಾಪರಳಾದ ಆ ಹೆಂಡತಿಯ ವಶಕ್ಕೆ ಬಿಟ್ಟುಕೊಡುವುದಿಲ್ಲವೆಂತಲೂ ಇನ್ನು ಯಾರೂ ತನ್ನ ಮಠದೊಳಕ್ಕೆ ಪ್ರವೇಶಿಸಕೂಡದೆಂತಲೂ, ತಾನು ಆ ಮನುಷ್ಯನ ಹುಚ್ಚನ್ನು ಗುಣಮಾಡಲು ನಯವಾದ ಮಾರ್ಗದಿಂದ ಪ್ರಯತ್ನಿಸುವೆನೆಂತಲೂ ಹೇಳಿಬಿಟ್ಟಳು. ಅನಂತರ ಅವರುಗಳು ಯಾರೂ ಒಳಕ್ಕೆ ಬಾರದಂತೆ ಮಠದ ಕದಗಳನ್ನು ಮುಚ್ಚಿಬಿಡಬೇಕೆಂದು ತನ್ನವರಿಗೆ ಆಜ್ಞೆಮಾಡಿ ತಾನು ಒಳಕ್ಕೆ ಹೊರಟು ಹೊದಳು.

ಹೀಗೆ ಸೋದರರ ಪರಸ್ಪರ ಹೋಲಿಕೆಗಳಿಂದ ನಾನಾ ವಿಧವಾದ ಆಭಾಸಗಳುಂಟಾದ ಈ ದಿನವೇ ವೃದ್ಧನಾದ ಈಗನನಿಗೆ ಪ್ರಭುವು ದಯಪಾಲಿಸಿದ್ದ ಒಂದು ದಿನದ ಅವಧಿಯು ಮುಗಿದು ಹೋಗುತ್ತಾ ಬಂದಿತು. ಸಂಧ್ಯಾಸಮಯವು ಸಮಿಾಪಿಸುತ್ತಿದ್ದಿತು. ಆ ಸಾಯಂಕಾಲದೊಳಗಾಗಿ ಆತನು ದಂಡದ ಹಣವನ್ನು ಒದಗಿಸಿಕೊಡದಿದ್ದಲ್ಲಿ ಅವನಿಗೆ ಮರಣವೇ ಸಿದ್ಧವಾಗಿದ್ದಿತು.

ಅವನ ವಧ್ಯಸ್ಥಾನವು ಈ ಮಠದ ಸಮಿಾಪದಲ್ಲೇ ಇತ್ತು. ಮಠಾಧ್ಯಕ್ಷಣಿಯು ಒಳಗೆ ಹೊರಟುಹೋದಾಗಲೇ ಈಗನನನ್ನೂ ವಧೆಗಾಗಿ ಅಲ್ಲಿಗೆ ಕರೆತಂದರು. ಯಾರಾದರೂ ಆತನಿಗಾಗಿ ಹಣವನ್ನು ಕೊಡುವುದಾದರೆ ತಾನು ಆತನನ್ನು ಕ್ಷಮಿಸಿ ಬಿಟ್ಟುಬಿಡುವುದಕ್ಕಾಗಿ ಪ್ರಭುವೂ ಸಹ ಅಲ್ಲಿಗೆ ಬಂದನು.

ಈ ಕ್ಲೇಶಕರವಾದ ಗುಂಪನ್ನು ಎಡ್ರಿಯಾನಳು ತಡೆದು, ಪ್ರಭುವಿನ ಬಳಿಗೆ ಬಂದು, ಮಠಾಧ್ಯಕ್ಷಳು ಹುಚ್ಚನಾದ ತನ್ನ ಗಂಡನನ್ನು ತನ್ನ ವಶಕ್ಕೆ ಒಪ್ಪಿಸದೆ ತಿರಸ್ಕರಿಸಿದಳೆಂತಲೂ, ತನಗೆ ನ್ಯಾಯಭಿಕ್ಷೆಯನ್ನು ಕರುಣಿಸಬೇಕೆಂತಲೂ ಬೇಡಿಕೊಂಡಳು. ಹೀಗೆ ಅವಳು ಕೇಳಿಕೊಳ್ಳುತ್ತಿರುವಾಗಲೇ ಅವಳ ನಿಜವಾದ ಗಂಡನೂಅವನ ಸೇವಕನಾದ ಡ್ರೋಮಿಯನೂ ಕಟ್ಟುಗಳನ್ನು ಬಿಚ್ಚಿಕೊಂಡು ಕಾವಲುಗಾರರಿಗೆ ಸಿಕ್ಕದಂತೆ ಓಡಿಬಂದರು. ಈ ಈಫೆಸಸಿನ ಆಂಟಿಫೋಲಸನು ಪ್ರಭುವನ್ನು ನೋಡಿ, "ಮಹಾಪ್ರಭೂ, ನನ್ನ ಪತ್ನಿಯು ನನಗೆ ಹುಚ್ಚು ಹಿಡಿದಿರುವುದೆಂದು ಸುಳ್ಳು ಕಾರಣವನ್ನು ಹೂಡಿ ನನ್ನನ್ನು ಬಂಧಿಸಿ ಸೆರೆಗೆ ಸೇರಿಸಿದ್ದಳು. ಆದರೆ ನಾನು ಕಟ್ಟುಗಳನ್ನು ಹರಿದುಕೊಂಡು ಕಾವಲುಗಾರರಿಗೆ ಸಿಕ್ಕದೆ ತಪ್ಪಿಸಿಕೊಂಡು ಬಂದೆನು. ಈ ವಿಷಯವನ್ನು ಸ್ವಾಮಿಯವರು ವಿಚಾರಣೆಮಾಡಿ ನ್ಯಾಯವಾದ ತೀರ್ಪನ್ನು ಅಪ್ಪಣೆ ಕೊಡಿಸಬೇಕು." ಎಂಬದಾಗಿ ಕೇಳಿಕೊಂಡು ತಾನೂ ಡ್ರೋಮಿಯನೂ ಸೆರೆಯಿಂದ ತಪ್ಪಿಸಿಕೊಂಡು ಬಂದ ರೀತಿಯನ್ನು ವಿವರವಾಗಿ ಬಿನ್ನವಿಸಿದನು.

ಎಡ್ರಿಯಾನಳು ಅವನನ್ನು ನೋಡಿದ ಕೂಡಲೇ ಮಠದಲ್ಲಿದ್ದ ತನ್ನ ಗಂಡನು ಈ ಕಡೆಯಿಂದ ಹೇಗೆ ಬಂದನೆಂದು ಪರಮಾಶ್ಚರ್ಯಚಕಿತಳಾದಳು.

ಈಗನ್ನನು ಇವನನ್ನು ನೋಡಿ, ತಾಯಿಯನ್ನೂ ಸೋದರನನ್ನೂ ಹುಡುಕಲು ಹೋಗಿದ್ದ ತನ್ನ ಮಗನು ಇವನೇ ಎಂದು ನಿಶ್ಚಯಿಸಿ, ತನ್ನ ಪ್ರಾಣವನ್ನುಳಿಸಲು ಇವನು ದಂಡದ ಹಣವನ್ನು ಕೂಡಲೇ ಕೊಟ್ಟುಬಿಡುವನೆಂತಲೂ ತನ್ನ ಪ್ರಾಣಕ್ಕೆ ಇನ್ನು ಭಯವಿಲ್ಲವೆಂತಲೂ ಮನಸ್ಸಿಗೆ ಧೈರ್ಯವನ್ನು ತಂದುಕೊಂಡನು. ಆದಕಾರಣ ಆತನು ಈಫೆಸಸ್ಸಿನ ಆಂಟಿಫೋಲಸನನ್ನು ನೋಡಿ, ಇವನು ತನ್ನನ್ನು ಬಿಡುಗಡೆಮಾಡುವನೆಂದು ಸಂತೋಷಪಟ್ಟು, ಪುತ್ರವಾತ್ಸಲ್ಯದಿಂದ ಮಾತನಾಡಿಸಿದನು. ಆದರೆ ಈ ಮುದುಕನು ಯಾರೆಂಬುದೇ ತನಗೆ ಲೇಶವೂ ತಿಳಿಯದೆಂದು ಅವನು ತನ್ನ ಪರಿಚಯವನ್ನೇ ನಿರಾಕರಿಸಿದುದನ್ನು ನೋಡಿ ಈಗನ್ನನಿಗೆ ಅತ್ಯಂತಾಶ್ಚರ್ಯವೂ ಉಂಟಾಯಿತು. ನಿಜವಾಗಿಯೂ ಆಂಟಿಫೋಲಸನು ಮಗುವಾಗಿದ್ದಾಗ ಬಿರುಗಾಳಿಯಲ್ಲಿ ಹಡಗಿನ ಧ್ವಜಸ್ತಂಭಕ್ಕೆ ಬಿಗಿಯಲ್ಪಟ್ಟಿದ್ದುದು ಮೊದಲಾಗಿ ತನ್ನ ತಂದೆಯನ್ನು ನೋಡಿಯೇ ಇರಲಿಲ್ಲ. ಈಗನ್ನನು ತನ್ನ ಮಗನಿಗೆ ಎಷ್ಟು ವಿಧವಾಗಿ ಗುರುತು ಪರಿಚಯಗಳನ್ನು ಹೇಳಿದರೂ ಎಲ್ಲವೂ ವ್ಯರ್ಥವಾಯಿತು. ಕಡೆಗೆ ತನ್ನ ಮಗನು ಬಹಳ ವ್ಯಥೆಗೆ ಸಿಕ್ಕಿ ಚಿತ್ತಭ್ರಾಂತಿಯಿಂದ ತನ್ನ ಪರಿಚಯವನ್ನು ಮರೆತು ಹೋಗಿರಬಹುದೆಂತಲೂ, ಇಲ್ಲವಾದರೆ ಇಂತಹ ಪ್ರಾಣಾಪಾಯ ಕಷ್ಟದಲ್ಲಿರುವ ತನ್ನನ್ನು ತಂದೆಯೆಂದು ಒಪ್ಪಿಕೊಳ್ಳಲು ಸಹ ಅವಮಾನವೆಂದೆಣಿಸಿ ಅವನು ತನ್ನ ಮಾತುಗಳಿಗೆ ಸದುತ್ತರವನ್ನು ಹೇಳದೆ ಇರುತ್ತಿರಲಿಲ್ಲವೆಂತಲೂ ಮನಸ್ಸಿನಲ್ಲಿ ತರ್ಕಿಸುತ್ತಿದ್ದನು. ಹೀಗೆ ಈಗನ್ನನು ಚಿತ್ತಕ್ಷೋಭೆಯಿಂದಿರುವ ಸಮಯದಲ್ಲಿ ಮಠಾಧ್ಯಕ್ಷಳೂ ಮತ್ತೊಬ್ಬ ಆಂಟಿಫೋಲಸನೂ ಮತ್ತೊಬ್ಬ ಡ್ರೋಮಿಯನೂ ಮಠದಿಂದ ಹೊರಗೆಬಂದರು. ಎಡ್ರಿಯಾನಳು ಇಬ್ಬರು ಗಂಡಂಧಿ

ರನ್ನೂ ಇಬ್ಬರು ಡ್ರೋಮಿಯರನ್ನೂ ನೋಡಿ ಬೆಚ್ಚಿ ವಿಭ್ರಾಂತಳಾಗಿ ನಿಂತಳು.

ಇಲ್ಲಿಯವರೆಗೂ ಎಲ್ಲರ ಮನಸ್ಸುಗಳಿಗೂ ಕ್ಲೇಶವನ್ನುಂಟುಮಾಡಿದ್ದ ನಾನಾ ವಿಧವಾದ ಆಭಾಸಗಳಿಗೆ ಕಾರಣವೇನೆಂಬುದು ಈಗ ಎಲ್ಲರಿಗೂ ಮನಸ್ಸಿಗೆ ಬಂತು. ಪರಸ್ಪರ ಸ್ವಲ್ಪವೂ ರೂಪಭೇದವಿಲ್ಲದೆ ಇದ್ದ ಇಬ್ಬರು ಆಂಟಿಫೋಲಸರನ್ನೂ ಇಬ್ಬರು ಡ್ರೋಮಿಯರನ್ನೂ ಪ್ರಭುವು ನೋಡಿದ ಕೂಡಲೇ ಆತನಿಗೆ ಆ ದಿನ ಪ್ರಾತಃಕಾಲದಲ್ಲಿ ಈಗನ್ನನು ವಿವರಿಸಿ ಹೇಳಿದ್ದ ಕಥೆಯು ಜ್ಞಾಪಕಕ್ಕೆ ಬಂದು, ಇಂತಹ ವಿಚಿತ್ರಗಳು ನಡೆಯಲು ಅವಕಾಶವಾದುದು ನ್ಯಾಯವೆಂದು ಆತನು ತಿಳಿದುಕೊಂಡನು. ಆ ಕೂಡಲೇ ಆತನು, ಇವರಿಬ್ಬರೂ ಈಗನ್ನನ ಮಕ್ಕಳೆಂತಲೂ ಮತ್ತಿಬ್ಬರು ಅವರ ಸೇವಕರೆಂತಲೂ ಹೇಳಿಬಿಟ್ಟನು.

ಈಗ ಅನಿರೀಕ್ಷಿತವಾದ ಮತ್ತೊಂದು ಸಂತೋಷ ವಿಷಯವು ಗೋಚರವಾಯಿತು. ಈಗನ್ನನು ಆ ದಿನ ಪ್ರಾತಃಕಾಲದಲ್ಲಿ ತಾನು ಮರಣದಂಡನೆಯಾಜ್ಞೆಯನ್ನು ಪಡೆದಾಗ ವಿವರಿಸಿದ ಅವನ ದುಃಖಕರವಾದ ವೃತ್ತಾಂತವು ಸೂರ್ಯನು ಅಸ್ತಮಿಸುತ್ತಿರುವಾಗ ಆತನಿಗೆ ಆನಂದದಾಯಕವಾಗಿ ಕೊನೆಗಂಡಿತು. ಹೇಗೆಂದರೆ: ಮಠಾಧ್ಯಕ್ಷಳಾಗಿದ್ದ ಆ ಪೂಜ್ಯ ಸ್ತ್ರೀಯು ತಾನು ಬಹು ದಿನಗಳ ಹಿಂದೆ ಗಂಡನಿಂದ ತಪ್ಪಿಬಂದ ಈಗನ್ನನ ಪತ್ನಿಯೂ ಇಬ್ಬರು ಆಂಟಿಫೋಲಸರ ತಾಯಿಯೂ ಎಂಬದಾಗಿ ನಿದರ್ಶನಗಳ ಮೂಲಕ ವಿವರವಾಗಿ ತಿಳಿಸಿದಳು.

ಬೆಸ್ತರು ಹಿರಿಯ ಆಂಟಿಫೋಲಸನನ್ನೂ ಡ್ರೋಮಿಯನನ್ನೂ ತನ್ನಿಂದ ಕಸಿದುಕೊಂಡು ಹೋದಾಗ ಆಕೆಯು ಬಂದು ಸನ್ಯಾಸಿನೀಮಠವನ್ನು ಸೇರಿದ್ದಳು. ಅಲ್ಲಿ ಅವಳ ವಿವೇಕ ಬುದ್ಧಿಯಿಂದಲೂ ಉತ್ತಮವಾದ ನಡೆನುಡಿಗಳಿಂದಲೂ ಕಡೆಗೆ ಅವಳೇ ಆ ಮಠದ ಅಧ್ಯಕ್ಷಳಾಗಿ ನಿಯಮಿತಳಾಗಿದ್ದಳು. ಮಠದ ಧರ್ಮದಂತೆ ನೊಂದವರಿಗೆ ಉಪಕಾರ ಮಾಡುವ ಕಾರ್ಯದಲ್ಲಿ ತನಗೆ ಗೋಚರವಿಲ್ಲದೆಯೇ ಆಕೆ ತನ್ನ ಸ್ವಂತ ಮಗನನ್ನು ಕಾಪಾಡಿದಳು.

ಬಹುಕಾಲ ಪರಸ್ಪರ ಅಗಲಿ ಹೋಗಿದ್ದು ಮತ್ತೆ ಸೇರಿದ ಆ ತಂದೆತಾಯಿಗಳ ಮತ್ತು ಮಕ್ಕಳ ಆನಂದ ಕೊಲಾಹಲದಲ್ಲಿ ಸ್ವಲ್ಪಹೊತ್ತು, ಈಗನ್ನನಿಗೆ ಒದಗಿದ್ದ ಮರಣದಂಡನೆಯ ವಿಚಾರವೇ ಅವರಿಗೆ ಮರೆತುಹೋಗಿದ್ದಿತು. ಆದರೆ ಸ್ವಲ್ಪಹೊತ್ತಿನ ಮೇಲೆ ಈಸೆಸಸ್ಸಿನ ಆಂಟಿಫೋಲಸನು ತನ್ನ ತಂದೆಯ ಪ್ರಾಣದಾನಕ್ಕಾಗಿ ಪ್ರಭುವಿಗೆ ದಂಡದ ಹಣವನ್ನು ಒಪ್ಪಿಸುವುದಕ್ಕೆ ಬರಲು, ಆತನು ಆ ಹಣವನ್ನು ತೆಗೆದುಕೊಳ್ಳದೆಯೇ ಉದಾರ ಮನಸ್ಸಿನಿಂದ ಈಗನ್ನನನ್ನು ಬಿಡುಗಡೆಮಾಡಿದನು. ತರುವಾಯ ಪ್ರಭುವು ಮಠಾಧ್ಯಕ್ಷಳನ್ನೂ, ಬಹುದಿನಗಳಿಗೆ ಸಂಧಿಸಿದ ಆಕೆಯ ಗಂಡನನ್ನೂ ಮಕ್ಕಳನ್ನೂ ಸೇವಕರನ್ನೂ ಕರೆದುಕೊಂಡು ಮಠದೊಳಕ್ಕೆ ಹೋಗಿ, ಸಂತೋಷಕರವಾಗಿ ಪರಿಣಮಿಸಿದ ಆ ಆಂದವಾದ ಸಂಸಾರದ ವಿಚಿತ್ರಗಳನ್ನೂ ಕಷ್ಟಗಳನ್ನೂ ಅವರಲ್ಲಿ ಒದಗಿದ ಆಭಾಸಗಳನ್ನೂ ವಿವರವಾಗಿ ವಿಚಾರಿಸಿ ತಿಳಿದುಕೊಂಡು ಸಂತೋಷಪಟ್ಟನು. ಡ್ರೋಮಿಯರಿಬ್ಬರೂ ಒಬ್ಬರನ್ನೊಬ್ಬರು ನೋಡಿ ಪ್ರತಿಯೊಬ್ಬನೂ ತನ್ನನ್ನು ಕನ್ನಡಿಯಲ್ಲಿ ನೋಡಿಕೊಂಡಂತೆ ಇದ್ದ ವಿಚಿತ್ರಕ್ಕಾಗಿ ಆಶ್ಚರ್ಯಪಟ್ಟು ಸೋದರರೆಂದು ಪರಸ್ಪರ ಆಲಿಂಗಿಸಿ ಸಂತೋಷ ಪರವಶರಾದರು.

ಎಡ್ರಿಯಾನಳಿಗೆ ತನ್ನ ಅತ್ತೆಯು ಹೇಳಿದ ಬುದ್ಧಿವಾದವು ಚೆನ್ನಾಗಿ ಮನಸ್ಸಿಗೆ ಹತ್ತಿ ತುಂಬಾ ವಿವೇಕವು ಬಂತು. ಅಲ್ಲಿಂದ ಮುಂದಕ್ಕೆ ಅವಳು ತನ್ನ ಗಂಡನ ವಿಷಯವಾಗಿ ಅನ್ಯಾಯವಾದ ಸಂದೇಹಗಳನ್ನು ಲೇಶವೂ ಇಟ್ಟುಕೊಳ್ಳದೆಯೂ ಅಸೂಯೆಯಿಲ್ಲದೆಯೂ ವರ್ತಿಸಿ ಸುಖವಾಗಿದ್ದಳು.

ಸೈರಕ್ಯೂಸಿನ ಆಂಟಿಫೋಲಸನಿಗೆ ಎಡ್ರಿಯಾನಳ ತಂಗಿಯಾದ ಲೂಸಿಯಾನಳನ್ನು ಕೊಟ್ಟು ವಿವಾಹ ಮಂಗಳವು ನಡೆಯಿತು. ವೃದ್ಧ ಈಗನ್ನನು ತನ್ನ ಪತ್ನೀಪುತ್ರ ಸೇವಕರೊಡಗೂಡಿ ಈಫೆಸಸ್ ನಗರದಲ್ಲಿಯೇ ಅನೇಕ ವರ್ಷಗಳ ಕಾಲ ಸುಖದಿಂದ ಸಂಸಾರ ಮಾಡಿಕೊಂಡಿದ್ದನು. ನಿಜಾಂಶಗಳೆಲ್ಲವೂ ಇಷ್ಟು ಸ್ಪಷ್ಟವಾಗಿ ವ್ಯಕ್ತವಾದರೂ ಆಂಟಿಫೋಲಸ್ ಮತ್ತು ಡ್ರೋಮಿಯರ, ಲೇಶವೂ ಭೇದವಿಲ್ಲದ ಹೋಲಿಕೆಗಳಿಂದ ಮುಂದಕ್ಕೆ ಆಭಾಸಗಳಾಗುವುದು ಮಾತ್ರ ತಪ್ಪಲಿಲ್ಲ. ಕಳೆದುಹೋದ ಕ್ಲೇಶಾಭಾಸಗಳನ್ನು ಆಗಾಗ ಇವರ ನೆನಪಿಗೆ ತರುವಂತೆ ಒಂದೊಂದು ಸಲ ಒಬ್ಬ ಆಂಟಿಫೋಲಸನನ್ನು ಇನ್ನೊಬ್ಬ ಆಂಟಿಫೋಲಸನೆಂತಲೂ ಒಬ್ಬ ಡ್ರೋಮಿಯನನ್ನು ಇನ್ನೊಬ್ಬ ಡ್ರೋಮಿಯನೆಂತಲೂ ತಿಳಿದುಕೊಳ್ಳುವಹಾಗೆ ಜನರಿಗೆ ಭ್ರಾಂತಿಯುಂಟಾಗಿ ಬಲು ವಿಚಿತ್ರ ವಿನೋದಗಳು ನಡೆಯುತ್ತಲೇ ಇದ್ದವು.

# ಅವ್ವೈಯಾರ ಕೃತಿಗಳು.

ಶ್ರೀ ಎಲ್. ಗುಂಡಪ್ಪ



## ೧ ಆತ್ತಿಸೂಡಿ

ಅವ್ವೈಯಾರ ಕೃತಿಗಳಲ್ಲಿ ಈ 'ಆತ್ತಿಸೂಡಿ' ಮೊದಲನೆಯದು. ಬಾಲ ಪಾಠಕ್ಕೆ ಇದನ್ನು ವಿಶೇಷವಾಗಿ ಬಳಸುತ್ತಾರೆ. ತಮಿಳು ನಾಡಿನಲ್ಲಿ ಈ ಕೃತಿಯ ಪರಿಚಯವಿಲ್ಲದವರು ಒಬ್ಬರೂ ಇಲ್ಲವೆಂದರೂ ಸಲ್ಲುತ್ತದೆ.

ಪ್ರಾರ್ಥನೆಯ ಪದ್ಯದ ಮೊದಲ ಮಾತು 'ಆತ್ತಿಶೂಡಿ.' ಇದರಿಂದ ಪೂರ್ಣ ಕೃತಿಗೂ 'ಆತ್ತಿಶೂಡಿ'ಯೆಂದೇ ಹೆಸರು ಬಂದಿದೆ

ಇಲ್ಲಿ ಮೊದಲು ತಮಿಳು ಮೂಲವನ್ನು ಕೊಟ್ಟಿದೆ. ಅದರ ಕೆಳಗೆ, ಸ್ವಲ್ಪ ಬಲಗಡೆಗೆ ಒತ್ತಿಕೊಂಡು ಕನ್ನಡ ಅನುವಾದವನ್ನು ಕೊಟ್ಟಿದೆ. ಅದರ ಕೆಳಗೆ, ಅವಶ್ಯಕವೆಂದು ತೋರಿದ ಕಡೆ ಅರ್ಥ, ವಿವರಣೆ ಕೊಟ್ಟಿದೆ.

ಮೂಲದಲ್ಲಿ ವಚನಗಳು ಅ, ಆ, ಇ, ಈ, ಎಂದು ಅಕಾರದಿ ಕ್ರಮದಲ್ಲಿವೆ. ಕನ್ನಡ ಅನುವಾದದಲ್ಲಿ ಮೊದಲೆರಡು ವಚನಗಳನ್ನು ಅದೇ ಕ್ರಮದಲ್ಲಿ ಕೊಟ್ಟಿದೆ. ಅವುಗಳ ಮೊದಲ ಮಾತುಗಳು ಅದೇ ರೂಪದಲ್ಲಿ ಕನ್ನಡದಲ್ಲೂ ಬಳಕೆಯಲ್ಲಿರುವುದರಿಂದ ಇದು ಸಾಧ್ಯವಾಯಿತು. ಉಳಿದ ಕಡೆಗಳಲ್ಲಿ ಅಕಾರದಿ ಕ್ರಮವನ್ನು ಉಳಿಸಿಕೊಳ್ಳಲು ಪ್ರಯತ್ನ ಮಾಡಿಲ್ಲ. ಕ್ಲೇಶಪಟ್ಟು ಹುಡುಕಿ ತಡಕಿ ಮಾತು ಕೂಡಿಸುವುದರಿಂದ ಏನನ್ನೂ ಸಾಧಿಸಿದಂತಾಗುವುದಿಲ್ಲ. ಸಹಜವಾದ ಕನ್ನಡ ಭಾಷಾಂತರವನ್ನು ಮಾತ್ರ ಕೊಟ್ಟಿದೆ.

ಕನ್ನಡ ಅನುವಾದದಲ್ಲಿ 'ಱ, ೞ' ಕಾರಗಳನ್ನು ಉಪಯೋಗಿಸಿಲ್ಲ.]

ಕಡವುಳ್ ವಾೞ್ತ್ತು

ಆತ್ತಿಶೂಡಿಯಮರ್ನ್ದ ದೇವನ್ನೈ
ಏತ್ತಿ ಯೇತ್ತಿ ತ್ತೊೞುವೋಮಿಯಾಮೇ

ದೇವರ ಪ್ರಾರ್ಥನೆ

ಆತ್ತಿಸೂಡಿದವನೊಲ್ದ ದೇವನನ್
ನುತಿಸಿ ನುತಿಸಿ ವಂದಿಸುವೆವಾವು

ಆತ್ತಿ : ಬನಸಂಪಿಗೆ. ಇದರ ಹೂವು ಶಿವನಿಗೆ ಮೆಚ್ಚು. ಆತ್ತಿ ಸೂಡಿದವನ್ : ಆತ್ತಿ ಹೂವನ್ನು ಮುಡಿದವನು, ಶಿವ (ಸೂಡು= ಮುಡಿ). ಶಿವ ಒಲಿದ ದೇವ : ಗಣಪತಿ. 'ಗಣಪತಿಯನ್ನು ಹೊಗಳಿ ನಮಸ್ಕರಿಸುತ್ತೇವೆ' ಎಂದು ತಾತ್ಪರ್ಯ.

ಗ್ರಂಥ

೧ ಅಱಞ್ಜೆಯ ವಿರುಮ್ಬು
ಅರಗೈಯಲೆಳಸು.

ಧರ್ಮಮಾಡಬಯಸು [ಅರ= ಧರ್ಮ]. ಧರ್ಮಂ ಚರ–ವೇದ.

೨ ಆಱುವದು ಶಿನವ್.
ಆರಬೇಕಾದ್ದು ಸಿಟ್ಟು.

ಆರಬೇಕಾದ್ದು= ತಣಿಯಬೇಕಾದ್ದು. ಕೋಪವನ್ನು ಅಡಗಿಸಿಕೊಳ್ಳಬೇಕು. 'ಆರಬೇಕಾದ್ದು' ಎಂಬ ಮಾತಿನಿಂದ, 'ಕೋಪ ಬೆಂಕಿಯ ಹಾಗೆ' ಎಂದು ಸೂಚನೆ ತೋರುತ್ತದೆ.

೩ ಇಯಲ್ವದು ಕರವೇಲ್.
ಅಪ್ಪುದನಡಗಿಸಬೇಡ.

ಬೇರೆಯವರಿಗೆ ಕೊಡುವುದಕ್ಕೆ ನಿನಗೆ ಸಾಧ್ಯವಿರುವ ವಸ್ತುಗಳನ್ನು ಅವರಿಗೆ ಕೊಡದೆ ಮುಚ್ಚಿಡಬೇಡ. ಸಾಧ್ಯವಿರುವ ಮಟ್ಟಿಗೂ ಕೇಳಿದವರಿಗೆ ಇಲ್ಲ ಎನ್ನದೆ ಕೊಡು. ಯಥಾಶಕ್ತಿ ದಾನಮಾಡು.

೪ ಈವದು ವಿಲಕ್ಕೇಲ್.
ಈವುದನಡ್ಡಯಿಸಬೇಡ.

ಬೇರೆಯವರು ಮಾಡುವ ದಾನಕ್ಕೆ ಅಡ್ಡಿ ಒಡ್ಡಬೇಡ (ಈ= ಕೊಡು. ಅಡ್ಡಯಿಸು= ಅಡ್ಡಿಮಾತು).

೫ ಉಡೈಯದು ವಿಳಮ್ಬೇಲ್.
ಉಳ್ಳುದನುಗ್ಗಡಿಸಬೇಡ.

ನಿನಗಿರುವ ಸಂಪತ್ತು ಜ್ಞಾನ ಯೋಗ್ಯತೆ ಮೊದಲಾದ್ದನ್ನು ನೀನೇ ಹೊಗಳಿ ಹೇಳಿಕೊಳ್ಳಬೇಡ. (ಉಗ್ಗಡಿಸು= ಸಾರಿ ಹೇಳು; ಘೋಷಿಸು.) 'ನಿನ್ನಲ್ಲಿರುವ ಹಣ ಇತರರಿಗೆ ಗೊತ್ತಾಗುವಂತೆ ಹೇಳಿಬಿಡಬೇಡ'—ಎಂದೂ ಅರ್ಥ ಮಾಡುತ್ತಾರೆ.

೬ ಊಕ್ಕಮದು ಕೈವಿಡೇಲ್.
ಉತ್ಸಾಹವ ಕೈಬಿಡಬೇಡ.

೭ ಎಣ್ಣೆೞುತ್ತಿಗೞೇಲ್.
ಎಣಿಕೆಯಕ್ಕರಗಳ ಹಳಿಯಬೇಡ.

ಎಣಿಕೆ= ಲೆಕ್ಕ, ಗಣಿತ. ಅಕ್ಕರ= ಅಕ್ಷರ; ಸಾಹಿತ್ಯ. ಶಾಸ್ತ್ರ, ಸಾಹಿತ್ಯ–ಎರಡನ್ನೂ ನಿರ್ಲಕ್ಷಿಸಬೇಡ. 'ಉದಾಸೀನ ಮಾಡದೆ ಕಲಿಯಬೇಕು'—ಎಂದು ಅಭಿಪ್ರಾಯ.

೮ ಏಱ್ಪದಿಗೞ್ಚಿ.
ಎರೆವುದು ಹಳಿವು.

ಬೇಡುವುದು ಹಳಿವಿಗೆ ಕಾರಣವಾಗುತ್ತದೆ (ಎರೆ= ಬೇಡು). ಭಿಕ್ಷೆ ಯೆತ್ತುವುದು ಅವಮಾನಕರ.

೯ ಐಯಮಿಟ್ಟುಣ್.
ಭಿಕ್ಷವಿಟ್ಟುಣ್ಣು.

ಭಿಕ್ಷ ಬೇಡುವುದು ತಪ್ಪು, ಗೌರವಕ್ಕೆ ಕುಂದು. ಆದರೆ, ಭಿಕ್ಷ ಕೊಡಬೇಕಾದ್ದು ಕರ್ತವ್ಯ. ತಾನು ಊಟ ಮಾಡುವ ಮೊದಲು

ಭಿಕ್ಷ ಬೇಡುವವರಿಗೆ ಕೊಟ್ಟು ತೃಪ್ತಿಪಡಿಸಿ, ಆಮೇಲೆ ತಾನು ಊಟ ಮಾಡಬೇಕು.

೧೦ ಒಪ್ಪುರವೊಟುಗು.

ಉಪಕರಿಸೆ ನಡೆ.

ಇತರರಿಗೆ ಉಪಕಾರವಾಗುವಂತೆ ನಡೆ. 'ಲೋಕ ನಡೆಯುವ ರೀತಿಯನ್ನು ಅರಿತು ಅದಕ್ಕೆ ಹೊಂದುವಂತೆ ನಡೆ'—ಎಂದೂ ಅರ್ಥಮಾಡಬಹುದು.

೧೧ ಓದುವದೊಟಿಯೇಲ್.

ಓದುವುದನುಳಿಯದಿರು.

ಗ್ರಂಥ ವ್ಯಾಸಂಗವನ್ನು ಬಿಡಬಾರದು (ಉಳಿ = ಬಿಡು). ಸ್ವಾಧ್ಯಾಯಾನ್ಮಾ ಪ್ರಮದಃ—ವೇದ.

೧೨ ಔವಿಯಮ್ ಪೇಶೇಲ್.

ಕರುಬನಾಡದಿರು.

ಯಾರ ವಿಷಯದಲ್ಲೂ ಹೊಟ್ಟೆಕಿಚ್ಚಿನ ಮಾತಾಡಬಾರದು.

೧೩ ಅಃಕಞ್ಞುರುಕ್ಕೇಲ್.

ಧಾನ್ಯವ ಕುಗ್ಗಿಸಬೇಡ.

ಕಾಳಳತೆ ಕೊರೆಮಾಡಬೇಡ. ಹೆಚ್ಚು ಲಾಭದ ಆಸೆಯಿಂದ, ಮಾರುವಾಗ ಕಡಮೆ ಅಳತೆಯನ್ನು ಉಪಯೋಗಿಸಬಾರದು.

೧೪ ಕಣ್ಡೊನ್ರು ಶೊಲ್ಲೇಲ್.

ಕಂಡೊಂದು ನುಡಿಯಬೇಡ.

ಒಂದು ಕಂಡು ಬೇರೊಂದಾಯಿತೆಂದು ಆಡಬೇಡ. ಕಂಡದ್ದು ಕಂಡ ಹಾಗೆಯೇ ಹೇಳಬೇಕು.

೧೫ ಙಪ್ಪೋಲ್ ವಳೈ.

ಙಕಾರದಂತೆ ಬಳಸು.

ಬಂಧುಗಳನ್ನು ಬಳಸಿ ಒಳಕೊಳ್ಳು. ಬಳಸು =ಒಳಕೊಳ್ಳುವಂತೆ ಸುತ್ತಿ ತಬ್ಬಿಕೊ. ತಮಿಳು ಪದಗಳಲ್ಲಿ 'ಙ' ಕಾರದ ಒಂದೇ ರೂಪ ಪ್ರಯೋಗವಾಗುತ್ತದೆ. ಙಾ, ಙಿ, ಮೊದಲಾದ ಅದರ ಗುಣಿತ ರೂಪಗಳು ಬಳಕೆಯಿಲ್ಲ. ಆದರೂ ಕಾ ಗುಣಿತದಲ್ಲಿ ಆ ರೂಪಗಳನ್ನೆಲ್ಲಾ ಕಲಿಸುತ್ತಾರೆ. 'ಙ' ಒಂದು ನೆಲೆ ನಿಂತು ತನ್ನ ಗುಂಪಿನ ಇತರ ರೂಪಗಳಿಗೆಲ್ಲಾ ಆಶ್ರಯ ಕೊಟ್ಟಿರುವಂತೆ, ಮನುಷ್ಯ ತನ್ನ ನಂಟರನ್ನೆಲ್ಲಾ ಆಶ್ರಯಕೊಟ್ಟು ರಕ್ಷಿಸಬೇಕು—ಎಂದು ಅಭಿಪ್ರಾಯ.

'ಙ' ಅಕಾರವೊಂದರೊಡನೆ ಮಾತ್ರ ಕೂಡಿ ನಡೆಯುವಂತೆ, ಒಬ್ಬ ಪುರುಷನನ್ನು ಮಾತ್ರ ಕೂಡಿ ಬಾಳು—ಎಂದು ಹೆಣ್ಣಿಗೆ ಹೇಳಿದ ಉಪದೇಶ ಎಂದೂ ಇದನ್ನು ವಿವರಿಸುತ್ತಾರೆ.

೧೬ ಶನಿ ನೀರಾಡು.

ಶನಿವಾರ ನೀರೆರೆದುಕೋ.

'ತಣ್ಣೀರಿನಲ್ಲಿ ಸ್ನಾನಮಾಡು' ಎಂದೂ ಈ ಮಾತಿಗೆ ಅರ್ಥ ಮಾಡುತ್ತಾರೆ.

೧೭ ಞಾಯಂಬಡ ವುರೈ.

ನಯದೋರೆ ಒರೆ.

ಇನಿದಾಗಿ ನುಡಿ. ಕೇಳುವವರಿಗೆ ಹಿತವಾಗುವಂತೆ ಮಾತಾಡು. 'ಪ್ರಿಯಂ ಬ್ರೂಯಾತ್'

೧೮ ಇಡಮ್ಬಡ ವೀಡೆಡೇಲ್.

ಎಡೆಮಿಗೆ ಮನೆಗಟ್ಟಬೇಡ.

ಆವಶ್ಯಕತೆಗಿಂತ ಹೆಚ್ಚಾಗಿ ದೊಡ್ಡಮನೆ ಕಟ್ಟಬೇಡ.

೧೯ ಇಣಕ್ಕಮಱಿನ್ದಿಣಙ್ಗು.

ಕೆಳೆಯರಿತು ಕೆಳೆಮಾಡು.

ಗೆಳೆಯರಾಗಲುಳ್ಳವರ ಗುಣ ಸ್ವಭಾವಗಳನ್ನು ಅರಿತುಕೊಂಡು ಆ ಮೇಲೆ ಅವರೊಡನೆ ಸ್ನೇಹ ಬೆಳಸಬೇಕು.

೨೦ ತನ್ದೈತಾಯ್ ಪ್ಪೇಣ್.

ತಂದೆತಾಯ ಕಾಪಾಡು.

ಉಪಚರಿಸಿ ಶುಶ್ರೂಷೆಮಾಡು–ಎಂದೂ ಹೇಳಬಹುದು.

೨೧ ನನ್ರಿ ಮಱವೇಲ್.

ಉಪಕಾರವ ಮರೆಯಬೇಡ.

೨೨ ಪರುವತ್ತೇ ಪಯಿರ್‌ಶೆಯ್.

ಪರ್ವ [ಕಾಲ]ದಲಿ ಪಯಿರು ಮಾಡು.

ಕಾಲವರಿತು ಬೀಜ ಬಿತ್ತಿದರೆ ಪಯಿರು ಚೆನ್ನಾಗಿ ಬರುತ್ತದೆ. ಯಾವ ಕೆಲಸವನ್ನೇ ಆಗಲಿ ಅದಕ್ಕದಕ್ಕೆ ತಕ್ಕ ಕಾಲದಲ್ಲಿ ಮಾಡಿದರೆ ಉತ್ತಮ ಫಲ ದೊರೆಯುತ್ತದೆ.

೨೩ ಮನ್ರು ಪಱಿತ್ತುಣ್ಣೇಲ್.

ಸಭೆಯಲ್ಲಿ ಕವರ್ದುಣ್ಣಬೇಡ.

ನ್ಯಾಯಾಲಯದಲ್ಲಿ ವ್ಯವಹಾರಗಳ ತೀರ್ಮಾನಕ್ಕಾಗಿ ಬಂದವರಿಂದ ಹಣ ಕಸಿದುಕೊಂಡು ಜೀವಿಸಬೇಡ [ಕವರ್ = ಕಿತ್ತುಕೋ]. ಲಂಚ ತೆಗೆದುಕೊಳ್ಳಬೇಡ.

[ಪಾಠಾಂತರ:

ಮಣ್ ಪಱಿತ್ತುಣ್ಣೇಲ್.

ಮಣ್ಣ ಕವರ್ದುಣ್ಣಬೇಡ.

ಇತರರಿಗೆ ಸೇರಿದ ನೆಲವನ್ನು ಕಿತ್ತುಕೊಂಡು ಜೀವಿಸಬೇಡ].

೨೪ ಇಯಲ್ಬಲಾದನ ಶೆಯೇಲ್.

ಸಾಜಮಲ್ಲದುವ ಮಾಡಬೇಡ.

ಯೋಗ್ಯವಲ್ಲದ ಕಾರ್ಯಗಳನ್ನು ಮಾಡಬೇಡ.

೨೫ ಅರವಮಾಟ್ಟೇಲ್.

ಹಾವಾಡಿಸಬೇಡ.

೨೬ ಇಲವಮ್ಬಞ್ಜಿಱ್ರುಯಿಲ್.

ಎಲವದ ಹತ್ತಿಯಲ್ಲಿ ಮಲಗು.

ಬೂರುಗದ ಹತ್ತಿಯ ಮೆತ್ತೆಯಲ್ಲಿ ಮಲಗು.

೨೭ ವಞ್ಜಗಮ್ ಪೇಶೇಲ್.

ವಂಚನೆಯಾಡಬೇಡ.

೨೮ ಅೞಗಲಾದನ ಶೆಯೇಲ್.

ಚೆಲುವಲ್ಲದುವ ಮಾಡಬೇಡ.

ಚೆನ್ನಲ್ಲದ ಕೆಲಸಗಳನ್ನು, ಅಯೋಗ್ಯ ಕಾರ್ಯಗಳನ್ನು ಮಾಡಬೇಡ.

೨೯ ಇಳಮೈಯಿಱ್ ಕಲ್.

ಎಳವೆಯಲ್ಲಿ ಕಲಿ.

ಚಿಕ್ಕಂದಿನಲ್ಲಿ ವಿದ್ಯೆ ಕಲಿಯಬೇಕು.

೩೦ ಅಱನೈ ಮಱವೇಲ್.

ಅರಮಂ ಮರೆಯಬೇಡ.

ಅರ= ಧರ್ಮ. ಮರೆಯದೆ ಸದಾ ಧರ್ಮ ಮಾಡುತ್ತಲೇ ಇರಬೇಕು. ಧರ್ಮಾತ್ ನ ಪ್ರಮದಿತವ್ಯಂ—ವೇದ.

[ಪಾಠಾಂತರ :

ಅರನೈ ಮಱವೇಲ್.

ಹರನಂ ಮರೆಯಬೇಡ].

೩೧ ಅನನ್ದಲಾಡೇಲ್.

ನಿದ್ರೆಯನಾಡಬೇಡ.

ಅತಿ ನಿದ್ರೆ ಮಾಡಬೇಡ.

೩೨ ಕಡಿವದು ಮಱ.

ಕಡು ನುಡಿಯ ಮರೆ.

ಯಾರನ್ನೂ ಕಟುವಾಗಿ ಆಡಬೇಡ. 'ನಿಷಿದ್ಧನ ಮರೆ' ಎಂದೂ ಅರ್ಥ ಮಾಡುತ್ತಾರೆ.

೩೩ ಕಾಪ್ಪದು ವಿರತಮ್.

ಕಾವುದು ವ್ರತಂ.

ಪ್ರಾಣಿಗಳನ್ನು ಕೊಲ್ಲದೆ ಕಾಪಾಡುವುದೇ ತಪಸ್ಸು. ಕೊಲ್ಲದಿರುವುದೇ ಧರ್ಮ. 'ಕಾಯಬೇಕಾದ್ದು ವ್ರತ' ಎಂದರೆ, ತಾನು ಕೈಕೊಂಡ ಧರ್ಮವನ್ನು ತಪ್ಪದೆ ನಡಸುತ್ತಿರಬೇಕು—ಎಂದೂ ಅರ್ಥ ಮಾಡಬಹುದು.

೩೪ ಕಿೞಮೈಪ್ಪಡ ವಾೞ್.

ಬಾಧ್ಯಪಟ್ಟು ಬಾಳು.

ನಿನ್ನ ಒಡಲೂ ಒಡವೆಯೂ ಬೇರೆಯವರಿಗೆ ಉಪಯೋಗವಾಗುವಂತೆ ಬಾಳು; ಹೆರರಿಗಾಗಿ ಬಾಳು. 'ಪರೋಪಕಾರಾರ್ಥಮಿದಂ ಶರೀರಂ.'

೩೫ ಕೀೞ್ಮೈಯ ಗಱ್ಱು.

ಕೀಳ್ಮೆಯ ತೊಲಗಿಸು.

ಕೀಳಾದ ಗುಣ ನಡತೆಗಳನ್ನು ತೊರೆದುಬಿಡು.

೩೬ ಕುಣಮದು ಕೈವಿಡೇಲ್.

ಗುಣವ ಕೈ ಬಿಡಬೇಡ.

ಉತ್ತಮ ಗುಣಗಳನ್ನು ಬಿಟ್ಟು ಬಿಡ ಬೇಡ. 'ಗುಣವುಳ್ಳುದ ಕೈ ಬಿಡಬೇಡ' ಎಂದೂ ಹೇಳಬಹುದು. ಯಾವುದು ಒಳ್ಳೆಯದೋ ಪ್ರಯೋಜನಕಾರಿಯೋ ಅದನ್ನು ಬಿಡಬೇಡ—ಎಂದು ಅಭಿಪ್ರಾಯ.

೩೭ ಕೂಡಿ ಪ್ಪಿರಿಯೇಲ್.

ಕೂಡಿ ಅಗಲಬೇಡ.

೩೮ ಕೆಡುಪ್ಪದೊೞಿ.

ಕೆಡಿಪುದನುಳಿ.

ಕೇಡು ಮಾಡುವುದ ಬಿಡು. ಕೇಡುಂಟು ಮಾಡುವ ಕೆಲಸಗಳನ್ನು ತೊರೆ.

೩೯ ಕೇಳ್ವಿ ಮುಯಲ್.

ಕೇಳ್ವಿಗೆ ಯತ್ನಿಸು.

ಕೇಳಿ ಕಲಿಯಲು ಆದಷ್ಟು ಯತ್ನ ಮಾಡು. [ಕೇಳ್ವಿ : ಕೇಳುವುದು ; ಶ್ರುತ.]

೪೦ ಕೈವಿನೈ ಕರವೇಲ್.

ಕೈಗೆಲಸವ ಕಡೆಗಣಿಸಬೇಡ.

೪೧ ಕೊಳ್ಳೈ ವಿರುಮ್ಬೇಲ್.

ಕೊಳ್ಳೆಯ ಬಯಸಬೇಡ.

೪೨ ಕೋದಾಟ್ಟೊೞಿ.

ಕೆಟ್ಟಾಟವನುಳಿ.

ಜೂಜು ಮೊದಲಾದ ಕೆಟ್ಟ ಆಟಗಳನ್ನು ಬಿಡು. ದೋಷ ಕಾರ್ಯಗಳನ್ನು ಬಿಟ್ಟುಬಿಡು.

[ಕೆಲವು ಪ್ರತಿಕೆಳಲ್ಲಿ ಮಾತ್ರ ದೊರೆಯುವ ಹೆಚ್ಚುಪಾಠ :

ಕೌವೈಯಗಱ್ಱು.

ದುಃಖವ ತೊಲಗಿಸು.]

೪೩ ಶಕ್ಕರ ನೆಱಿ ನಿಲ್.

ಚಕ್ರದ ನಿರಿಯೊಳು ನಿಲ್ಲು.

ರಾಷ್ಟ್ರದ ಕಟ್ಟುಕಟ್ಟಳೆಗಳ ಪ್ರಕಾರ ನಡೆದುಕೊ [ಚಕ್ರ: ರಾಜ್ಯ ಶಾಸನ. ನಿರಿ= ದಾರಿ.]

೪೪ ಶಾನ್ಱೋರಿನತ್ತಿರು.

ಸಂಪನ್ನರ ಕೂಟದೊಳಿರು.

ಉತ್ತಮರ ಸಹವಾಸದಲ್ಲಿರು.

೪೫ ಶಿತ್ತಿರಮ್ ಪೇಶೇಲ್.

ಚಿತ್ರವನಾಡಬೇಡ.

ಸುಳ್ಳು ನಿಜವಾಗಿ ತೋರುವ ಹಾಗೆ ಚಿತ್ರ ವಿಚಿತ್ರವಾಗಿ ಮಾತಾಡಬೇಡ.

೪೬ ಶೀರ್ಮೈ ಮಱವೇಲ್.

ಮೇಲ್ಮೆಯ ಮರೆಯಬೇಡ.

ಶ್ರೇಷ್ಠತೆಯನ್ನು, ಎಂದರೆ ಶ್ರೇಷ್ಠತೆಗೆ ಕಾರಣವಾದ ಗುಣಗಳನ್ನು ಮರೆಯಬೇಡ.

೪೭ ಶುಳಿಕ್ಕ ಚ್ಚೊಲ್ಲೇಲ್.

ಮುಖ ಸಿಂಡರಿಸಿಕೊಳ್ಳುವಂತಾಡಬೇಡ.

ರೇಗುವಂತಾಡಬೇಡ. ಕೇಳಿದವರು ಕೋಪಗೊಳ್ಳುವಂಥ ಮಾತನ್ನು ಆಡಬೇಡ.

೪೮ ಶೂದು ವಿರುಮ್ಬೇಲ್.

ಜೂದನೊಲಿಯಬೇಡ.

ಜೂದು= ಜೂಜು. ಜೂಜಾಟಕ್ಕೆ ಮನಸ್ಸು ಕೊಡಬೇಡ.

೪೯ ಶೆಯ್ವನ ತಿರುನ್ದ ಚ್ಚೆಯ್.

ಗೆಯ್ವವನೊಪ್ಪೆ ಗೆಯ್.

ಮಾಡುವವನೊಪ್ಪಾಗಿ ಮಾಡು. ಯಾವ ಕೆಲಸ ಮಾಡಿದರೂ ಚೆನ್ನಾಗಿ ಮಾಡು.

೫೦ ಶೇರಿಡಮಱಿನ್ದು ಶೇರ್.

ಸೇರುವೆಡೆಯನರಿದು ಸೇರು.

ಎಲ್ಲಿಗೆ ಹೋಗಿ ಸೇರಬೇಕೆಂಬುದನ್ನು ಚೆನ್ನಾಗಿ ತಿಳಿದು ನಿರ್ಧರಿಸಿಕೊಂಡು ಪ್ರಯತ್ನಪಟ್ಟು ಅಲ್ಲಿ ಹೋಗಿ ಸೇರಬೇಕು. ಸಾಧಿಸಬೇಕಾದ ಗುರಿಯನ್ನು ಮೊದಲೇ ಗೊತ್ತುಮಾಡಿಕೊಂಡು ಸಾಧಿಸಬೇಕು.

೫೧ ಶೈಯೆನತ್ತಿರಿಯೇಲ್.

ಛೀಯೆನಲಲೆಯಬೇಡ.

ಜನ 'ಛೀ!' ಎನ್ನುವಂತೆ ಅಲೆಯಬೇಡ.

೫೨ ಶೊಱ್ಚೋರ್ವು ಪಡೇಲ್.

ಸೊಲ್ಪಲ್ಲಟ ಪಡಬೇಡ.

ಮಾತಾಡುವಾಗ ಆಡಬೇಕಾದ್ದನ್ನು ಮರೆತು ಒಂದಕ್ಕೆ ಬದಲಾಗಿ ಮತ್ತೊಂದನ್ನು ಆಡಿಬಿಡ ಬೇಡ.

೫೩ ಶೋಮ್ಬಿತ್ತಿರಿಯೇಲ್.

ಸೋಮಾರಿಯಲೆಯಬೇಡ.

೫೪ ತಕ್ಕೋನೆನತ್ತಿರಿ.

ತಕ್ಕವನೆನೆ ನಡೆ.

೫೫ ತಾನಮದು ವಿರುಮ್ಬು.

ದಾನವ [ಕೊಡ] ಬಯಸು.

೫೬ ತಿರುಮಾಲುಕ್ಕಡಿಮೈ ಶೆಯ್.

ತಿರುಮಲನಿಗೆ ಸೇವೆ ಮಾಡು.

ಶ್ರೀಹರಿಗೆ ಸೇವೆ ಮಾಡು. (ಮಾಲ್–ವಿಷ್ಣು.)

೫೭ ತೀವಿನೈಯಗಱು.

ಕೆಟ್ಟ ಕೆಲಸವ ತೊರೆ.

೫೮ ತುನ್ಬತ್ತಿಱ್ಕಿಡಙ್ಕೊಡೇಲ್.

ದುಃಖಕೆಡೆ ಗೊಡಬೇಡ.

'ದುಃಖವುಂಟುಮಾಡುವ ಕೆಲಸಕ್ಕೆ ಕೈ ಹಾಕಬೇಡ' ಎಂದೂ, 'ಕೆಲಸ ಮಾಡುವಾಗ ಉಂಟಾಗುವ ದುಃಖಕ್ಕೆ, ಕಷ್ಟಕ್ಕೆ ಅಂಜಿ ಅದನ್ನು ಕೈ ಬಿಡಬೇಡ' ಎಂದೂ ವಿವರಿಸುತ್ತಾರೆ.

೫೯ ಶೂರ್ಕ್ಕೆ ವಿನೈ ಶೆಯ್.

ತೂಗಿ ಕೆಲಸ ಮಾಡು.

ಸರಿಯೆ ತಪ್ಪೆ, ಸಾಧ್ಯವೇ ಅಸಾಧ್ಯವೇ, ಮೊದಲಾದ ಸಾಧಕ ಬಾಧಕಗಳನ್ನೆಲ್ಲಾ ಚೆನ್ನಾಗಿ ವಿಚಾರ ಮಾಡಿ ಕೆಲಸ ಮಾಡಬೇಕು.

೬೦ ತೆಯ್ವಮಿಗಟ್ಟೇಲ್.

ದೈವವ ತೆಗಳಬೇಡ.

ದೇವರನ್ನು ದೂಷಿಸಬೇಡ. ದೇವ ನಿಂದೆ ಮಾಡಬೇಡ.

೬೧ ತೇಶತ್ತೋಡೊತ್ತು ವಾೞ್.

ದೇಶದೊಡನೊಗ್ಗಿ ಬಾಳು.

ನೀನು ವಾಸ ಮಾಡುವ ದೇಶದ ಜನರೊಡನೆ ವಿರೋಧ ಕಟ್ಟಿಕೊಳ್ಳದೆ ಹೊಂದಿ ಬಾಳು.

೬೨ ತೈಯಲ್ ಶೊಱ್ಕೇಳೇಲ್.

ಕಾದಲೆಯ ಮಾತು ಕೇಳಬೇಡ.

ಮೆಚ್ಚಿನ ಮಡದಿ ಹೇಳಿದ ಮಾತ್ರಕ್ಕೆ ವಿಮರ್ಶೆ ಮಾಡದೆ ಆ ಮಾತನ್ನು ನಂಬಿ ನಡೆಯ ಬೇಡ.

೬೩ ತೊನ್ಮೈ ಮಱವೇಲ್.

ಹಳಮೆಯ ಮರೆಯಬೇಡ.

ಹಳೆಯ ಸ್ನೇಹ, ಹಿಂದಿನ ಸಂಪ್ರದಾಯ, ತನ್ನ ಪೂರ್ವದ ಪರಿಸ್ಥಿತಿ, ಮೊದಲಾದ ಹಳೆಯ ಸಂಗತಿಗಳನ್ನು ಮರೆಯಬಾರದು.

೬೪ ತೋಱ್ಪನ ತೊಡರೇಲ್.

ಸೋಲ್ವವ ತೊಡಗ ಬೇಡ.

ಸೋಲುವಂಥ ಕೆಲಸಗಳಲ್ಲಿ ಕೈ ಹಾಕಬೇಡ.

೬೫ ನನ್ಮೈ ಕಡೈ ಪ್ಪಿಡಿ.

ನಲ್ಮೆಯ ಬಲ್ವಿಡಿವಿಡಿ.

ಒಳ್ಳೆಯದನ್ನು, ಶ್ರೇಯಸ್ಸಾಧಕವಾದ್ದನ್ನು, ಭದ್ರವಾಗಿ ಹಿಡಿ (ನಲ್ಮೆ= ಶ್ರೇಯಸ್ಸು).

೬೬ ನಾಡೊಪ್ಪನ ಶೆಯ್.

ನಾಡೊಪ್ಪುವವ ಮಾಡು.

ದೇಶದವರೆಲ್ಲಾ ಸರಿಯೆಂದು ಒಪ್ಪುವ ಕಾರ್ಯಗಳನ್ನು ಮಾಡು.

೬೭ ನಿಲೈಯಿಱ್ಪಿಱಿಯೇಲ್.

ನೆಲೆಯಿಂದಗಲದಿರು.

ಉತ್ತಮ ಸ್ಥಿತಿಯಿಂದ, ಸ್ಥಾನದಿಂದ, ಕದಲಿ ಹೋಗಬೇಡ.

೬೮ ನೀರ್ವಿಳೈಯಾಡೇಲ್.

ನೀರಾಟವಾಡದಿರು.

ಆಳವಾದ ನೀರಿನಲ್ಲಿ, ಪ್ರವಾಹದಲ್ಲಿ ಈಜಿ ಆಟವಾಡಬೇಡ.

೧೯ ನುಣ್ಮೈ ನುಗರೇಲ್.

ನುಣ್ಣಣವು ನುಂಗದಿರು.

ಆರೋಗ್ಯಕ್ಕೆ ಗಮನ ಕೊಡದೆ ರುಚಿ ಪ್ರಧಾನವಾದ ರಸ ಭಕ್ಷ್ಯಗಳನ್ನು ತಿನ್ನಬೇಡ. [ನುಣ್ಣುಣವು= ಸೂಕ್ಷ್ಮ ರುಚಿಯ ಆಹಾರ; ಸವಿಯುಣಿಸು ; ರಸಭಕ್ಷ್ಯ]. 'ಕಿರುತಿಂಡಿ ತಿನ್ನಬೇಡ' ಎಂದೂ ಅರ್ಥಮಾಡಬಹುದು.

೨೦ ನೂಲ್ ಪಲ ಕಲ್.

ಗ್ರಂಥ ಹಲವ ಕಲಿ.

ಅನೇಕ ಶಾಸ್ತ್ರಗಳನ್ನು ಅಭ್ಯಾಸಮಾಡು.

೨೧ ನೆಲ್ಪಯಿರ್ ವಿಳೈ.

ನೆಲ್ಪಯಿರು ಬೆಳೆ.

ಬತ್ತದ ಪಯಿರು ಬೆಳೆ.

೨೨ ನೇರ್ಪಡ ವೊಬುಗು.

ನೇರ್ಪಡೆ ನಡೆ.

ನಡವಳಿಕೆ ವಕ್ರವಾಗದಂತೆ, ನೇರವಾಗಿ ನಡೆ. ಋಜು ಮಾರ್ಗದಲ್ಲಿ ಹೋಗು.

೨೩ ನೈ ವಿನ್ನೈ ನಣುಗೇಲ್.

ಕೆಡುಗೈಮೆ ಸಾರದಿರು.

ಕೇಡು ಕೆಲಸದ ಕಡೆ ಸುಳಿಯಬೇಡ. ಇತರರಿಗೆ ಕೇಡು ತರುವಂಥ ಕೆಟ್ಟ ಕೆಲಸಕ್ಕೆ ಕೈ ಹಾಕಬೇಡ.

೨೪ ನೊಯ್ಯ ವುರೈಯೇಲ್.

ಅಲ್ಪವನಾಡದಿರು.

ಪ್ರಯೋಜನವಿಲ್ಲದ ಅಲ್ಪವಿಚಾರಗಳನ್ನು ಕುರಿತು ಆಡಬೇಡ.

೨೫ ನೋಯ್ಕ್ಕಿಡಙ್ಕೊಡೇಲ್.

ರೋಗಕೆಡೆಗೊಡಬೇಡ.

ರೋಗಕ್ಕೆ ಅವಕಾಶ ದೊರೆಯದಂತೆ ಆಹಾರ ವಿಹಾರಗಳಲ್ಲಿ ಎಚ್ಚತ್ತಿರು.

೨೬ ಪೞಿಪ್ಪನ ಪಗರೇಲ್.

ಹಳಿವವ ಹೇಳಬೇಡ.

ಯೋಗ್ಯರಾದವರು ತಪ್ಪೆನ್ನುವಂಥ ಮಾತುಗಳನ್ನು ಆಡಬೇಡ.

೨೭ ಪಾಮ್ಬೊಡು ಪೞಗೇಲ್.

ಹಾವೊಡನೆ ಪಳಗಬೇಡ.

ಹಾವಿನ ಜೊತೆ ಆಟವಾಡುವುದನ್ನು ರೂಢಿ ಮಾಡಿಕೊಳ್ಳಬೇಡ. ಹಾವಿನ ಹಾಗೆ ದುಷ್ಟರಾದವರ ಸಹವಾಸ ಮಾಡಬೇಡ.

೨೮ ಪಿೞೈಪಡ ಚ್ಚೊಲ್ಲೇಲ್.

ತಪ್ಪು ದೋರೆ ನುಡಿಯದಿರು.

ದೋಷ ಉಂಟಾಗುವಂತೆ ಮಾತಾಡಬೇಡ.

೨೯ ಪೀಡು ಪೆಱ ನಿಲ್.

ಗಾಂಭೀರ್ಯ ತೋರೆ ನಿಲ್ಲು.

ಗೌರವವುಂಟಾಗುವಂತೆ ಸನ್ಮಾರ್ಗದಲ್ಲಿ ನಿಲ್ಲು.

೩೦ ಪುಗೞ್ನ್ದಾರೈ ಪ್ಪೋಱ್ಱಿ ವಾೞ್.

ಹೊಗಳಿದವರ ಪೊರೆದು ಬಾಳು.

ನಿನ್ನನ್ನು ಆಶ್ರಯಿಸಿದವರನ್ನು ಕಾಪಾಡು.

೩೧ ಪೂಮಿ ತಿರುತ್ತಿಯುಣ್.

ಭೂಮಿಯ ಹಸಗೈದುಣ್ಣು.

ಭೂಮಿಯನ್ನು ವ್ಯವಸಾಯ ಮಾಡಿ ಬೆಳೆ ಬೆಳೆದು ಜೀವನ ಮಾಡು. ವ್ಯವಸಾಯಮಾಡಿ ಆಹಾರ ಬೆಳೆಯುವುದು ಉತ್ತಮ ವೃತ್ತಿಯೆಂದು ಭಾವ.

೩೨ ಪೆರಿಯಾರೈ ತ್ತುಣೈ ಕ್ಕೊಳ್.

ಹಿರಿಯರನು ನೆರಗೊಳ್ಳು.

ದೊಡ್ಡವರ ಸಹಾಯವನ್ನು ಪಡೆದುಕೊ (ನೆರಗೊಳ್ಳು= ಸಹಾಯವನ್ನು ಸಂಪಾದಿಸು).

೩೩ ಪೇದೈಮೈಯಗಱ್ಱು.

ಹೆಡ್ಡತನವ ಹೋಗಿಸು.

ಹೆಡ್ಡತನವನ್ನು ಹೋಗಲಾಡಿಸಿಕೊ. ತಿಳಿವಳಿಕೆ ಸಂಪಾದಿಸು.

೩೪ ಪೈಯಲೋಡಿ ಣಙ್ಗೇಲ್.

ಹುಡುಗರ ಕೂಡಿಯಾಡದಿರು.

ಅರಿಯದ ಮಕ್ಕಳೊಡನೆ ಸೇರಬೇಡ. ತಿಳಿವಳಿಕೆಯಿಲ್ಲದವರ, ಅಲ್ಪರ ಸಹವಾಸ ಮಾಡಬೇಡ.

೩೫ ಪೊರುಡನೈ ಪ್ಪೋಱ್ಱಿ ವಾೞ್.

ಪುರುಳನ್ನು ಕಾದು ಬಾಳು.

ದ್ರವ್ಯವನ್ನು, ಹಣವನ್ನು, ವ್ಯರ್ಥವಾಗಿ ವೆಚ್ಚ ಮಾಡದೆ ಹೆಚ್ಚು ಮಾಡಿ ಕಾಪಾಡಿಕೊಂಡು ಬಾಳು.

೩೬ ಪೋರ್ತ್ತೊೞಿಲ್ ಪುರಿಯೇಲ್.

ಹೋರುಗೆಲಸ ಮಾಡಬೇಡ.

ಯಾರೊಡನೆಯೂ ಕಲಹಕ್ಕೆ ಮುನ್ನುಗ್ಗಬೇಡ. ಕಲಹಕ್ಕೆ ಕಾರಣವಾದ ಕೆಲಸ ಮಾಡಬೇಡ.

೩೭ ಮನನ್ದಡು ಮಾಱೇಲ್.

ಮನ ತಳಮಳಿಸದಿರು.

ಏನೇ ಬಂದರೂ ಮನಃಸ್ಥೈರ್ಯವನ್ನು ಕಳೆದುಕೊಳ್ಳಬೇಡ.

೩೮ ಮಾಱ್ಱಾನುಕ್ಕಿಡಙ್ಕೊಡೇಲ್.

ಹಗೆವನಿಗೆಡೆಗೊಡಬೇಡ.

ಆಗದವರು ನಿನಗೆ ತೊಂದರೆ ಮಾಡುವುದಕ್ಕೆ ಅವಕಾಶ ಕೊಡಬೇಡ.

೩೯ ಮಿಗೈಪಡ ಚ್ಚೊಲ್ಲೇಲ್.

ಮಿಗಿಲಾಗೆ ನುಡಿಯದಿರು.

ಅತಿ ಮಾತಾಡಬೇಡ. ಕಡಮೆ ಮಾತುಗಳಲ್ಲಿಯೇ ಅಭಿಪ್ರಾಯವನ್ನು ತಿಳಿಸು. ಮಿತವಾಗಿ ಮಾತಾಡು.

೯೦ ಮಿಾದೂಣ್ ವಿರುಮ್ಬೇಲ್.
ಮಿಗಿಲುಣವು ಬಯಸದಿರು.

ಹೆಚ್ಚಾಗಿ ಊಟ ಮಾಡಬೇಡ. ಮಿತಾಹಾರಿಯಾಗಿರು.

೯೧ ಮುನ್ನೈಮುಗತ್ತು ನಿಲ್ಲೇಲ್.
ಮೊನೆಮೊಗದಿ ನಿಲ್ಲದಿರು.

ಇಬ್ಬರು ಹೋರಾಡುತ್ತಿರುವಾಗ ಅವರ ನಡುವೆ ನಿಲ್ಲಬೇಡ. "ಕದನಮುಖದಿ ಸುಮ್ಮನಿರಬೇಡ. ಯುದ್ಧದ ಮುನ್ನಲೆಯಲ್ಲಿ ನಿಂತು ಸುಮ್ಮನಿರಬಾರದು; ಶೌರ್ಯದಿಂದ ಕಾದಬೇಕು." ಎಂದೂ ಅರ್ಥಮಾಡುತ್ತಾರೆ.

೯೨ ಮೂರ್ಕ್ಕರೋಡಿಣಙ್ಗೇಲ್.
ಮೂರ್ಖರೊಡನಾಡದಿರು.

ಮೂರ್ಖರ ಸಹವಾಸ ಮಾಡಬೇಡ.

೯೩ ಮೆಲ್ಲಿನಲ್ಲಾಡೋಳ್ ಶೇರ್.
ಮನೆಮಡದಿಯ ಮೆಲ್ದೋಳ ಸೇರು.

ಹೆಂಡತಿಯೊಡನೆ ಕೂಡಿ ಸುಖವಾಗಿ ಬಾಳು. ಬೇರೆ ಹೆಂಗಸರ ಸಂಗ ಮಾಡಬೇಡ. [ಮೆಲ್+ಇಲ್+ನಲ್ಲಾಳ್+ತೋಳ್+ಶೇರ್].

೯೪ ಮೇನ್ಮಕ್ಕಳ್ ಶೊಱ್ಕೇಳ್.
ಮೇಲ್ಜನರ ಮಾತು ಕೇಳು.

ಉತ್ತಮರ ಮಾತು ಕೇಳಿ ಅದರಂತೆ ನಡೆ.

೯೫ ಮೈವಿಟ್ಯಾರ್ ಮನ್ನೈಯಗಲ್.
ಕಾಡಿಗೆಗಣ್ಣಿಯರ ಮನೆ ಸಾರದಿರು.

ಸೂಳೆ ಮನೆಗೆ ಹೋಗಬೇಡ. [ಕಾಡಿಗೆಗಣ್ಣಿ ಕಣ್ಣಿಗೆ ಕಾಡಿಗೆ ಹಚ್ಚಿಕೊಂಡಿರುವ ಹೆಂಗಸು; ಇಲ್ಲಿ, ಸೂಳೆ.]

೯೬ ಮೊೞಿವದಱ ಮೊೞಿ.
ನುಡಿವುದ ಸಂಶಯವಳಿಯೆ ನುಡಿ.

ಮಾತಾಡುವಾಗ ಅಭಿಪ್ರಾಯ ನಿಸ್ಸಂದೇಹವಾಗಿ ಗೊತ್ತಾಗುವಂತೆ ಆಡಬೇಕು. ನಿರ್ಧಾರವಾಗಿ ಮಾತಾಡಬೇಕು.

೯೭ ಮೋಹತ್ತೈ ಮುನಿ.
ಮೋಹವ ಮುನಿ.

ಮೋಹದ ಮೇಲೆ ಕೋಪಿಸಿಕೊಂಡು ಅದನ್ನು ತೊರೆದುಬಿಡು.

೯೮ ವಲ್ಲಮೈ ಪೇಶೇಲ್.
ಬಲ್ಮೆಯನಾಡದಿರು.

ನಿನ್ನ ಸಾಮರ್ಥ್ಯವನ್ನು ನೀನೇ ಹೇಳಿಕೊಳ್ಳಬೇಡ. (ಬಲ್ಮೆ = ಶಕ್ತಿ; ಸಾಮರ್ಥ್ಯ.)

೯೯ ವಾದು ಮುಱ್ ಕೂಱೇಲ್.
ವಾದವ ಮುನ್ನಾಡದಿರು.

ನೀನೇ ಮೊದಲು ವಾದಕ್ಕೆ ತೊಡಕಿ ಕೆಣಕಬೇಡ.

೧೦೦ ವಿತ್ತೈ ವಿರುಮ್ಬು.
ವಿದ್ಯೆಯ ಬಯಸು.

೧೦೧ ವೀಡು ಪೆಱ ನಿಲ್.
ಬೀಡು ಪಡೆಯೆ ನಿಲ್ಲು.

ಮುಕ್ತಿ ಪಡೆಯುವುದಕ್ಕೆ ತಕ್ಕ ಧರ್ಮಮಾರ್ಗದಲ್ಲಿ ನಿಲ್ಲು. (ಬೀಡು= ಮುಕ್ತಿ; ಮೋಕ್ಷ.)

೧೦೨ ಉತ್ತಮನಾಯಿರು.
ಉತ್ತಮನಾಗಿರು.

೧೦೩ ಊರುಡನ್ ಕೂಡಿ ವಾೞ್.
ಊರೊಡನೆ ಕೂಡಿ ಬಾಳು.

೧೦೪ ವೆಟ್ಟೆನ ಪ್ಪೇಶೇಲ್.
ಕಡಿತವೆನ್ನಲಾಡದಿರು.

ಕತ್ತಿಯಿಂದ ಕತ್ತರಿಸಿದಂತೆ ಕಟುವಾಗಿ ಮಾತಾಡಬೇಡ.

೧೦೫ ವೇಣ್ಡಿ ವಿನೈ ಶೆಯೇಲ್.
ಬೇಡಿ ಕೆಲಸಮಾಡಬೇಡ.

'ಫಲದ ಆಶೆಯಿಂದ ಕೆಲಸ ಮಾಡಬೇಡ' ಎಂದೂ, 'ಬೇಕೆಂದೇ ಕೆಟ್ಟ ಕೆಲಸ ಮಾಡಬೇಡ' ಎಂದೂ ಈ ವಚನಕ್ಕೆ ಎರಡು ರೀತಿ ವಿವರಣೆ ಕೊಡುತ್ತಾರೆ.

೧೦೬ ವೈಗರೈ ತ್ತುಯಿಲೆೞು.
ಹೊತ್ತಾರೆಯೇಳು.

ಹೊತ್ತಿಗೆ ಮುಂಚೆ ಏಳು. ಸೂರ್ಯೋದಯಕ್ಕೆ ಮೊದಲೇ ಏಳು.

೧೦೭ ಒನ್ನಾರೈ ತ್ತೇಱೇಲ್.
ಆಗದವರ ನಂಬದಿರು.

[ಪಾಠಾಂತರ:
ಒನ್ನಾರೈಚ್ಚೇರೇಲ್.
ಹಗೆಗಳ ಸೇರದಿರು].

೧೦೮ ಓರ ಮ್ಶೊಲ್ಲೇಲ್.
ಪಕ್ಷಪಾತವಾಡದಿರು.

ಆತ್ತಿ ಸೂಡಿ ಮುಗಿಯಿತು.



# ಚೀನಾದ ಪ್ರಾಚೀನ ಸಮಾಜದಲ್ಲಿ ಸ್ತ್ರೀಯರು.

ಶ್ರೀಮತಿ ಎಸ್. ಬಾಲಾಂಬ, ಮೈಸೂರು.

ಪುರಾತನ ಇತಿಹಾಸದಿಂದ ಕೋಡಿರುವ ಚೀನಾ ದೇಶದ ಸಮಾಜಿಕ ರೀತಿಯಲ್ಲಿ ಮಾತೃ ಅಧಿಕಾರ ಪದ್ಧತಿ ಇತ್ತೆಂದು ಸಮಾಜ ಶಾಸ್ತ್ರ ತಿಳಿದವರು ಹೇಳುತ್ತಾರೆ. ಆ ಕಾಲದಲ್ಲಿ ಸ್ತ್ರೀಯರಿಗೆ ತಮ್ಮ ಇಚ್ಛೆಯಂತೆ ತಿರುಗಾಡಲು, ವಿವಾಹ ಮಾಡಿಕೊಳ್ಳಲೂ ಸ್ವಾತಂತ್ರ್ಯವೆ ಇತ್ತೆಂದು ಪ್ರಾಚೀನ ಕಾಲದ ಲೋಕಗೀತೆಗಳ ಸಂಗ್ರಹವಾದ 'ಕಾವ್ಯಸಂಹಿತಾ' ಎಂಬ ಗ್ರಂಥದಿಂದ ತಿಳಿದು ಬರುತ್ತದೆ. ಆದರೆ ಚೀನಾದೇಶದ ಇತಿಹಾಸದಿಂದ, ಸಮಾಜದಲ್ಲಿ ಸ್ತ್ರೀಯರು ಸ್ವತಂತ್ರವಾಗಿದ್ದರೆಂದೂ ಅಥವಾ ಅವರ ಸ್ಥಾನ ಪುರುಷರ ಸ್ಥಾನಕ್ಕೆ ಸಮನಾಗಿ ಅಥವಾ ಹೆಚ್ಚಾಗಿತ್ತೆಂದೂ ಪ್ರಮಾಣಸಹಿತವಾಗಿ ಸಿಕ್ಕುವುದಿಲ್ಲ. ಚೀನದ ಪ್ರಾಚೀನ ಪುಸ್ತಕ 'ಇಚಿಙ್'ನಲ್ಲಿ ಸೃಷ್ಟಿ ತತ್ವದ ವರ್ಣನೆಯಿದೆ. 'ಯಾಂಗ್ ಮತ್ತು ಯಿಂಗ್'ಗಳ ಯೋಗದಿಂದ ಸೃಷ್ಟಿಯ ರಚನೆಯಾಯಿತೆಂದು ಆ ಪುಸ್ತಕದಲ್ಲಿ ಸ್ಪಷ್ಟವಾಗಿ ವರ್ಣಿಸಿದ್ದಾರೆ. 'ಯಾಂಗ್' ಪುರುಷವಾಚಕ ಮತ್ತು 'ಯಿಂಗ್' ಸ್ತ್ರೀವಾಚಕ. 'ಯಾಂಗ್' ಸೂರ್ಯ, ಶಕ್ತಿ, ಪ್ರಕಾಶ, ಬುದ್ಧಿ ಮೊದಲಾದವುಗಳ ಮತ್ತು 'ಯಿಂಗ್' ಚಂದ್ರ, ಅಂಧಕಾರ, ನಿರ್ಜಲತೆ, ಅಜ್ಞಾನ ಮೊದಲಾದವುಗಳ ಪ್ರತೀಕವೆಂದು ಪರಿಗಣಿಸಲ್ಪಟ್ಟಿದೆ. ಇದರಿಂದ ಸ್ತ್ರೀತತ್ವವು ಪುರುಷ ತತ್ವಕ್ಕಿಂತ ಕೀಳಾಗಿದ್ದಿತು. ಚೀನಾದಲ್ಲಿ ಸಾಮಂತವಾದಿಗಳ ಕಾಲದಲ್ಲಿ ಸ್ತ್ರೀಯರಿಗೆ ಸ್ವಲ್ಪ ಸ್ವಾತಂತ್ರ್ಯವಿತ್ತು. ರಾಜಕೀಯತೆ ಸ್ಥಿರವಾದಮೇಲೆ ಸ್ತ್ರೀಪುರುಷರ ವರ್ಗದಲ್ಲಿ ಸಾಕಾದಷ್ಟು ಅಸಮಾನತೆಯು ಹೆಚ್ಚಲಾರಂಭಿಸಿತು. ಇದಕ್ಕೆ ಕಾರಣವೇನೆಂದರೆ ಸಾಮಂತವಾದಿಗಳ ಯುಗದ ಕೊನೆಯಲ್ಲಿ ಚೀನಾದಲ್ಲಿ 'ಕನ್‌ಫ್ಯುಶಸ್', 'ಮೆನಸಿಯಸ್' ಮೊದಲಾದ ದೊಡ್ಡ ಮಹಾತ್ಮರು ದಾರ್ಶನಿಕರಾಗಿದ್ದರು. ಇವರು ಸ್ತ್ರೀಯರಿಗಾಗಿ ಮಾಡಿದ ವಿಧಾನಗಳಿಂದ ಅವರ ದರ್ಜೆಯು ಕೆಳಮಟ್ಟಕ್ಕೆ ಬಂದಿತು. ಸ್ತ್ರೀಯರು ಮನೆಯ ಹೊರಗಿನ ಕೆಲಸಗಳಿಗೆ ಅಯೋಗ್ಯರೆಂದು ತಿಳಿದಿದ್ದರು. ಮನೆಯಲ್ಲೇ ತಮ್ಮ ಕಾರ್ಯ,ಕಲಾಪ ಮಾಡಿಕೊಂಡಿರಬೇಕಾಗಿತ್ತು. ಸ್ತ್ರೀಯರ ವಿಷಯದಲ್ಲಿ ಕನ್ಫ್ಯುಶಸ್‌ನ ಮತವು ಹೀಗಿತ್ತು :—ಸ್ತ್ರೀಯರು, ಪುರುಷರು, ಪೃಥ್ವಿ ಸ್ವರ್ಗದಂತೆ ಭಿನ್ನವಾಗಿದ್ದಾರೆ. ವಾಸ್ತವವಾಗಿ ಸ್ತ್ರೀಯರೂ ಮನುಷ್ಯರು. ಆದರೆ ಅವರ ದರ್ಜೆಯು ಪುರುಷರಿಗಿಂತ ಕೀಳುಗಿತ್ತು. ಅವರನ್ನು ಬಹಳ ವಿನಯವಂತರನ್ನಾಗಿ ಮಾಡುವುದೇ ಸ್ತ್ರೀ ಶಿಕ್ಷಣದ ಉದ್ದೇಶವಾಗಿತ್ತು ; ಅವರ ಮೆದುಳಿನ ವೃದ್ಧಿಗಾಗಲೀ ವಿಕಾಸಕ್ಕಾಗಲೀ ಅಲ್ಲ. ಸ್ತ್ರೀಯರು ಪುರುಷರ ಅಧೀನದಲ್ಲಿರಬೇಕೆಂಬುದು ಪ್ರಕೃತಿ ನಿಯಮ. ಆದುದರಿಂದ ಅವರನ್ನು ಅವರ ಇಚ್ಛೆಯಂತೆ ಬಿಡಬಾರದು.

ಮಹಾತ್ಮಾ ಕನ್‌ಫ್ಯುಶಸ್ ಮತ್ತು ಅವರ ಸಂಪ್ರದಾಯಕರು ಮಾಡಿದ ಪದ್ಧತಿಗಳು ಇಂದಿಗೆ ಎರಡು ಸಾವಿರ ವರ್ಷಗಳ ಹಿಂದಿನಿಂದ ಚೀನಾದಲ್ಲಿ ರೂಢಿಯಲ್ಲಿತ್ತು. ಸ್ತ್ರೀ ಮತ್ತು ಪುರುಷರಿಬ್ಬರೂ ಈ ಮತಾವಲಂಬಿಗಳಾಗಿದ್ದರು. ಇವರ ಪರವಾರದ ಎಲ್ಲಾ ಸದಸ್ಯರೂ ಮುಖಂಡನ ನಿಯಂತ್ರಣದಲ್ಲಿರಬೇಕಾಗಿತ್ತು. ಒಂದು ವೇಳೆ ಪರಿವಾರದಲ್ಲಿ ಯಾವ ಪುರುಷನೂ ಇಲ್ಲದೇ, ಮಕ್ಕಳು ಅಪ್ರಾಪ್ತ ವಯಸ್ಕರಾಗಿ, ಕಾರ್ಯಕ್ಕೆ ಅಯೋಗ್ಯರಾಗಿದ್ದರೆ, ಪರಿವಾರದ ವೃದ್ಧಸ್ತ್ರೀಯು ಆ ಸ್ಥಾನವನ್ನು ತೆಗೆದುಕೊಳ್ಳುತ್ತಿದ್ದಳು. ಮಕ್ಕಳು ದೊಡ್ಡವರಾದಮೇಲೆ ಅವರು ಆ ಸ್ಥಾನವನ್ನು ತ್ಯಜಿಸಬೇಕಾಗುತ್ತಿತ್ತು. ಚೀನಾದ ಒಂದು ಪ್ರಾಚೀನ ಗ್ರಂಥದಲ್ಲಿ ಸ್ತ್ರೀಯರ ಮೂರು ಕರ್ತವ್ಯಗಳು ತಿಳಿಸಲ್ಪಟ್ಟಿವೆ. (೧) ಕನ್ಯಾವಸ್ಥೆಯಲ್ಲಿ ತಂದೆಯ ಆಶ್ರದಲ್ಲಿರಬೇಕು. (೨) ವಿವಾಹವಾದಮೇಲೆ ಪತಿಯ ಆಶ್ರಯದಲ್ಲಿರಬೇಕು (೩) ವಿಧವೆಯಾದರೆ ಪುತ್ರನ ಆಶ್ರಯದಲ್ಲಿರಬೇಕು.

ಇದರಿಂದ ಸ್ತ್ರೀಯರು ಸಮಾಜದಲ್ಲಿ ಪುರುಷರ ಅಧೀನದಲ್ಲಿದ್ದರೆಂದು ತಿಳಿದು ಬರುತ್ತದೆ.

ಚೀನೀ ಧಾರ್ಮಿಕ ಗ್ರಂಥಗಳಲ್ಲಿ ಮಾತಾಪಿತೃಗಳಲ್ಲಿಡಬೇಕಾದ ಭಕ್ತಿಯ ವಿಷಯವನ್ನು ಬಹಳವಾಗಿ ವರ್ಣಿಸಿದ್ದಾರೆ. ಆದರೆ ತಂದೆಯಲ್ಲಿಯೇ, ತಾಯಿಗಿಂತ ಹೆಚ್ಚು ಭಕ್ತಿಯಿಡಬೇಕಾಗಿತ್ತು. ಪಿತೃಗಳನ್ನು ಪೂಜಿಸುವುದು ಚೀನಾ ಪರಿವಾರದ ಪ್ರಧಾನ ಧಾರ್ಮಿಕ ಅನುಷ್ಠಾನವಾಗಿತ್ತು. ಸ್ತ್ರೀಯರಿಗೆ ಭಾಗವಿರಲಿಲ್ಲ. ಬೇರೆಯ ಧಾರ್ಮಿಕ ಅನುಷ್ಠಾನಗಳಲ್ಲಿ ಕೂಡ ಪುರುಷರಂತೆ

ಸ್ತ್ರೀಯರಿಗೆ ಅಧಿಕಾರವಿರಲಿಲ್ಲ. ಸ್ತ್ರೀಯರು ಸತೀತ್ವ ಧರ್ಮಪರಾಯಣತೆ, ಮಧುರಮಿತಭಾಷಣ, ನಮ್ರತೆ, ಸದಾಚರಣೆ, ಗೃಹಕಾರ್ಯದಲ್ಲಿ ನಿಪುಣತೆ ಮುಂತಾದ ಗುಣಗಳನ್ನು ಹೊಂದಿರಬೇಕಾಗಿತ್ತು. "ಯಿಚಿಡ್" ಎಂಬ ಗ್ರಂಥದಲ್ಲಿ "ಸ್ತ್ರೀಯ ಕ್ಷೇತ್ರವು ಮನೆಯ ಒಳಗೆ ಮತ್ತು ಪುರುಷನ ಕ್ಷೇತ್ರವು ಹೊರಗೆ" ಎಂದಿದೆ. "ಲಿ ಚಿಡ್" ಎಂಬ ಮತ್ತೊಂದು ಗ್ರಂಥ ದಲ್ಲಿ ಪುರುಷರು ಮನೆಯ ಒಳಗಿನ ವಿಷಯದಲ್ಲೂ, ಸ್ತ್ರೀಯರು ಹೊರಗಿನ ವಿಷಯದಲ್ಲೂ ಅಡ್ಡಿ ಮಾಡ ಬಾರದು." ಆದರೆ ಸಾಮಾನ್ಯವಾಗಿ ಪುರುಷರು ಮನೆಯ ಒಳಗಿನ ವಿಷಯದಲ್ಲೂ ಅಡ್ಡಿ ಬರುತ್ತಿದ್ದರು. ಸ್ತ್ರೀಯರು ಮನೆಯಿಂದ ಹೊರಗೆ ಹೋಗಬಾರದಾಗಿತ್ತು. ಸ್ತ್ರೀಯರು ಪರದೆಯಿಲ್ಲದೆ ಹೊರಗೆ ಹೋಗುವುದು, ಪುರುಷರ ಜೊತೆ ಕುಳಿತು ಮಾತಾಡುವುದು, ಇವೆಲ್ಲಾ ತಪ್ಪುಗಳಾಗಿದ್ದವು. ಆದರೆ ಸಮಾಜದಲ್ಲಿ ಈ ನಿಯಮಗಳನ್ನು ಪಾಲಿಸದೇ ಇರುವ ಒಂದು ವರ್ಗವಿತ್ತು. ಅದು ಬಡವರ ವರ್ಗ. ಅವರು ತಮ್ಮ ಜೀವನಕ್ಕಾಗಿ ಹೊರಗೆ ಹೋಗಿ ಕೆಲಸ ಮಾಡಬೇಕಾಗಿತ್ತು.

ಆರ್ಥಿಕ ದೃಷ್ಟಿಯಲ್ಲಿ ಸ್ತ್ರೀಯರು ಪುರುಷರ ಆಧೀನ ದಲ್ಲಿದ್ದರು. ಆಸ್ತಿಯಲ್ಲಿ ಅವರಿಗೆ ಭಾಗವಿರಲಿಲ್ಲ. ಮನೆ ಯಿಂದ ಹೊರಗೆ ಹೋಗುವುದೇ ಅಪರಾಧವಾಗಿದ್ದಾಗ, ಉದ್ಯೋಗ ಮಾಡುವ ಮಾತೇ ಇರುತ್ತಿರಲಿಲ್ಲ. ಆರ್ಥಿಕ ಕಾರಣದಿಂದ ಬಡತಂದೆಯರು ತಮ್ಮ ಮಕ್ಕಳನ್ನು ಮಾರುತ್ತಿದ್ದರು. ಅವರು ಹಣವಂತರ ಮನೆಯ ದಾಸಿಯರಾಗುತ್ತಿದ್ದರು. ಉಚ್ಚ ಮತ್ತು ಮಧ್ಯಮ ವರ್ಗದ ಸ್ತ್ರೀಯರು ಆರ್ಥಿಕದಲ್ಲಿ ಪ್ರವೇಶಿಸುತ್ತಿರಲಿಲ್ಲ.

ಬಡವರಾದ ಸ್ತ್ರೀಯರು ಹೊಲಗಳಲ್ಲಿ ಕೂಲಿ ಕೆಲಸ ಮಾಡುತ್ತಿದ್ದರು. ಮನೆಯಲ್ಲಿ ಬಟ್ಟೆ ನೇಯು ತ್ತಿದ್ದರು, ಬಟ್ಟೆಯ ಚಪ್ಪಲಿಗಳನ್ನು ಮಾಡುತ್ತಿದ್ದರು, ಉದ್ಯೋಗವಿಲ್ಲದೆ ಜೀವನ ನಿರ್ವಹಿಸುವುದು ಅಸಾಧ್ಯ ವಾಗಿತ್ತು. ಆದರೆ ಹೀಗೆ ಸಂಪಾದಿಸಿದ ಹಣವನ್ನು ವಿನಿಯೋಗಿಸುವ ಅಧಿಕಾರವು ಪುರುಷರಿಗೆ ಸೇರಿತ್ತು. ಸ್ತ್ರೀಯರಿಗೆ ಆಸ್ತಿ ಇದ್ದರೆ, ಅದರ ಅಧಿಕಾರವು ಪುರು ಷರದಾಗಿತ್ತು. ಸ್ತ್ರೀಯು ಎರಡು ಪರಿವಾರದ ಮಧ್ಯೆ ವಿವಾದವನ್ನು ನಿಶ್ಚಯಿಸುತ್ತಿದ್ದಳು. ದಾದಿಯ ಕೆಲಸ ಮಾಡುತ್ತಿದ್ದಳು. ಸ್ತ್ರೀಯರು ಬೌದ್ಧ ಸಂಗಕ್ಕೆ ಸೇರಿ ಭಿಕ್ಷುಣಿಯರಾಗುತ್ತಿದ್ದರು.

ಕಾನೂನಿನ ದೃಷ್ಟಿಯಿಂದಲೂ ಕೂಡ ಸ್ತ್ರೀಯರ ಸ್ಥಾನವು ಪುರುಷರದಕ್ಕಿಂತ ಕೀಳಾಗಿತ್ತು. ಪುರುಷರ ಪರಸ್ತ್ರೀಗಮನ ದೋಷವು ತಪ್ಪಾಗಿರಲಿಲ್ಲ. ಆದರೆ ಪುರುಷರು, ಪರಪುರುಷ ಗಾಮಿನಿಯಾದ ತಮ್ಮ ಪತ್ನಿ ಯನ್ನು ಹತ್ಯೆಕೂಡ ಮಾಡುತ್ತಿದ್ದರು. ಈ ತಪ್ಪಿಗೆ ಶಿಕ್ಷೆಯಿರಲಿಲ್ಲ. ಪುರುಷರು ಇಷ್ಟಬಂದಾಗ ತಮ್ಮ ಸ್ತ್ರೀಯನ್ನು ಅಥವಾ ದಾಸಿಯನ್ನು ಬೇರೆಯವರಿಗೆ ಮಾರುತ್ತಿದ್ದರು. ಅಥವಾ ಕೆಲವು ದಿನಗಳಿಗಾಗಿ ಅಡವಿಟ್ಟಿರುತ್ತಿದ್ದರು. ಪುರುಷರು ತಮ್ಮ ಕನ್ಯೆಯರನ್ನು ಮಾರಲು ಅಡ್ಡಿಯಿರಲಿಲ್ಲ. ಕೆಲವು ಕಾರಣಗಳಿಂದ ಪುರುಷರಿಗೆ ಹೆಚ್ಚು ಅಧಿಕಾರವಿತ್ತು. ಒಂದು ವೇಳೆ ಪತ್ನಿಯು ಮಾವ ಅತ್ತೆಯರಿಗೆ ವಿಧೇಯಳಾಗಿರದಿದ್ದರೆ, ಪರಪುರುಷ ಗಾಮಿನಿಯಾಗಿದ್ದರೆ, ಕೆಟ್ಟ ಕಾಯಿಲೆಯಿಂದ ನರಳುತ್ತಿದ್ದರೆ, ವಾಚಾಳಿಯಾಗಿದ್ದರೆ, ಕಳ್ಳಿಯಾಗಿದ್ದರೆ, ಬಂಜೆಯಾಗಿದ್ದರೆ........ಈ ರೀತಿಯ ಅಧಿಕಾರವಿದ್ದರೂ ಪುರುಷರಿಗೆ ಕೆಲವು ಪ್ರತಿಬಂಧಕಗಳಿದ್ದುವು.

ಕಾಲಿಗೆ ಚಪ್ಪಲಿ ಧರಿಸುವ ಪದ್ಧತಿಯು ಚೀನೀ ಸ್ತ್ರೀಯರನ್ನು ಒಂದೇ ಸಲ ಕುಂಟರನ್ನಾಗಿಸಿ, ಪುರುಷರ ಆಧೀನ ಮಾಡಿತು. ನಾಲ್ಕೈದು ವರ್ಷದ ಹೆಣ್ಣು ಮಕ್ಕಳು ಜಾಗ್ರತೆಯಾಗಿ ಬೆಳೆಯುತ್ತಿದ್ದರೆ, ತಾಯಂದಿರು ಮಕ್ಕಳ ಕಾಲುಗಳಿಗೆ ಬಟ್ಟೆಗಳನ್ನು ಕಟ್ಟುತ್ತಿದ್ದರು. ಹೀಗೆ ಕಟ್ಟುವುದರಿಂದ ಕಾಲಿನ ಮೂಳೆಗಳು, ಮಾಂಸ ಖಂಡಗಳು ಬೆಳವಣಿಗೆಗೆ ಅಡ್ಡಿ ಹೊಂದಿ ಕೊಳೆತು ಹೋಗುತ್ತಿದ್ದವು. ಬೆರಳುಗಳು ಮುದುರಿ ಹೋಗುತ್ತಿದ್ದವು. ರಕ್ತಚಲನೆ ನಿಂತು ಕಾಲು ಸಣ್ಣದಾಗುತ್ತಿತ್ತು. ಇದಲ್ಲದೆ ಸ್ತ್ರೀಯರು ಒಂದು ವಿಧ ದಿಂದ ಕುಂಟರಾಗುತ್ತಿದ್ದರು. ಅವರಿಗೆ ವೇಗವಾಗಿ ನಡೆಯಲಾಗುತ್ತಿರಲಿಲ್ಲ. ಓಡುವುದಂತೂ ಸಾಧ್ಯವಿರ ಲಿಲ್ಲ. ಬಹಳ ದೂರ ನಡೆಯಲಾಗುತ್ತಿರಲಿಲ್ಲ. ಮೊದಲು ಈ ಪದ್ಧತಿಯು ಕೇವಲ ಉಚ್ಚ ತರಗತಿಯಲ್ಲಿತ್ತೆಂದು ತಿಳಿದುಬರುತ್ತದೆ. ತರುವಾಯ ಇದು ನಾಗರೀಕತೆ ಯಾಯಿತು. ಮತ್ತು ಎಲ್ಲಾ ವರ್ಗದಲ್ಲೂ ಸೌಂದರ್ಯ ಪ್ರತೀಕವೆಂದು ಹರಡಿತು. ಸ್ವಾಭಾವಿಕವಾಗಿ ಉದ್ದ ವಾಗಿ ಕಾಲಿರುವ ಸ್ತ್ರೀಯರಿಗೆ ಸಮಾಜದಲ್ಲಿ ಗೌರವವಿರ ಲಿಲ್ಲ. ಸಣ್ಣ ಕಾಲಿಲ್ಲದ ಹುಡುಗಿಯರಿಗೆ ವಿವಾಹ ವಾಗುವುದು ಕಷ್ಟವಾಗಿತ್ತು. ಈ ಕಾರಣಗಳಿಂದ ತಮ್ಮ ಮಕ್ಕಳ ಭವಿಷ್ಯವನ್ನು ಸುಖಮಯವಾಗಿ ಮಾಡಲು ತಾಯಂದಿರು ಕಾಲು ಕಟ್ಟುತ್ತಿದ್ದರು. ಇದರಿಂದ

ಸ್ವಾಭಾವಿಕ ಬೆಳವಣಿಗೆಗೆ ಅಡ್ಡಿ ಬಂದು ಅವರಿಗೆ ಅಸಾಧ್ಯ ವೇದನೆಯಾಗುತ್ತಿತ್ತು. ತಮ್ಮ ಭವಿಷ್ಯವನ್ನು ಯೋಚಿಸಿ ಅವರು ಅದನ್ನು ಸಹಿಸಿಕೊಳ್ಳುತ್ತಿದ್ದರು. ಯಾವುದಾದರೂ ಕಾರಣದಿಂದ ತಾಯಂದಿರು ಮಕ್ಕಳ ಕಾಲು ಕಟ್ಟದಿದ್ದರೆ, ಅವರು ದೊಡ್ಡವರಾದಮೇಲೆ ತಮಗೆ ಸಮಾಜದಲ್ಲಿ ಸರಿಯಾದ ಗೌರವವಿಲ್ಲವೆಂದೂ ತಾಯಂದರನ್ನು ಬಯ್ಯುತಿದ್ದರು. ಹೀಗೆ ಕಟ್ಟುವುದರಿಂದ ಸ್ತ್ರೀಯರ ಆರೋಗ್ಯ ಕೆಡುತ್ತಿತ್ತು. ಕಾಯಿಲೆಯೆಂದರೂ ತಕ್ಕ ಔಷಧಿ, ವೈದ್ಯರ ವ್ಯವಸ್ಥೆಗಳಿರಲಿಲ್ಲ. ಸಾಮಾನ್ಯವಾಗಿ ವೈದ್ಯರು ಪುರುಷರಾಗಿರುತ್ತಿದ್ದರು. ಸ್ತ್ರೀಯರು ಪರದೆಯಲ್ಲಿರುತ್ತಿದ್ದುದರಿಂದ ವೈದ್ಯರು ಅವರ ಸ್ಥಿತಿಯನ್ನು ಕೇಳಿಯೇ ಔಷದಿ ಕೊಡುತ್ತಿದ್ದರು. ರೋಗಿಯನ್ನು ನೋಡಿ ಪರೀಕ್ಷಿಸುವಂತಿರಲಿಲ್ಲ. ಹೀಗೆ ಕಾಲು ಕಟ್ಟುವ ಕಲೆಯ ಮೇಲೆ ಚೀನಾದಲ್ಲಿ ಅನೇಕ ಪುಸ್ತಕಗಳನ್ನು ಬರೆದಿದ್ದಾರೆ. ಚೀನಾ ಸಾಹಿತ್ಯವು ಸಣ್ಣಕಾಲಿನ ವರ್ಣನೆಯಿಂದ ತುಂಬಿದೆ. ಬಹಳ ಜನರು ಈ ಪದ್ಧತಿಯು ಸ್ತ್ರೀಯರ ಸೌಂದರ್ಯದ ವೃದ್ಧಿಯ ಸಾಧನೆಯೆಂದು ತಿಳಿದಿದ್ದರು.

ಪ್ರಾಚೀನ ಚೀನಾದ ಸ್ತ್ರೀಯರ ಬಾಲ್ಯದಿಂದ ವೃದ್ಧಾಪ್ಯದ ವರೆಗಿನ ಜೀವನವು ಪುರುಷರ ಅಧೀನದಲ್ಲಿತ್ತು. ಚೀನಾದ ಸಾಹಿತ್ಯದಲ್ಲೂ, ದರ್ಶನದಲ್ಲೂ, ಸಮಾಜದಲ್ಲೂ, ಸ್ತ್ರೀಯರಿಗೆ ಗೌರವ ಕೊಡಬೇಕೆಂಬ ಭಾವವಿರಲಿಲ್ಲ. ಪುತ್ರಿಯ ಜನನದಿಂದ ಮಾತಾ ಪಿತೃಗಳಿಗೆ ಸಂತೋಷವಾಗುತ್ತಿರಲಿಲ್ಲ. ಕೇವಲ ಸುಂದರ ಪುತ್ರಿಯರಿಂದ ಸಂತೋಷಪಡುತ್ತಿದ್ದರು. ಆರ್ಥಿಕ ದೃಷ್ಟಿಯಿಂದ ಪುತ್ರಿಯ ಜನನವು ಲಾಭದಾಯಕವಲ್ಲವೆಂದು ತಿಳಿಯುತ್ತಿದ್ದರು. ಪುತ್ರನು ಕೆಲಸ ಮಾಡಿ ಬಹಳ ಸಂಪಾದಿಸುತ್ತಾನೆ. ಪುತ್ರಿಯು ಮದುವೆಯಾದ ಮೇಲೆ ಬೇರೆಯ ಪರಿವಾರಕ್ಕೆ ಹೋಗುತ್ತಾಳೆ. ಪುತ್ರನು ದೊಡ್ಡವನಾದಮೇಲೆ ಸಾಹಸದಿಂದ ಮಾತಾಡುವುದು ಕಲಿಯಬೇಕಾಗಿತ್ತು. ಪುತ್ರಿಯು ನಮ್ರತೆಯಿಂದ ಮೆಲ್ಲಗೆ ಮಾತಾಡಬೇಕಾಗಿತ್ತು. ಕನ್ಯೆಗೆ ಯಾವ ವಿಧವಾದ ಶಿಕ್ಷಣ, ಅಕ್ಷರಜ್ಞಾನ ಕೊಡುತ್ತಿರಲಿಲ್ಲ. ಮನೆಯಲ್ಲಿ ತಾಯಿಗೆ ಕೆಲಸಕ್ಕೆ ನೆರವಾಗುತ್ತಿದ್ದಳು. ತಾಯಿಯು ಸುದಕ್ಷ ಗೃಹಿಣಿ; ಆಜ್ಞಾಕಾರಿಣಿಯಾದ ಪತ್ನಿ, ವಿನಯಯುತಳಾದ ಸೊಸೆಯಾಗಿರುವಂತೆ ಶಿಕ್ಷಣವನ್ನು ಕೊಡುತ್ತಿದ್ದಳು. ಕನ್ಯೆಯು ದೊಡ್ಡವಳಾದಂತೆ, ಅವಳ ಮೇಲೆ ಕಾವಲಿಟ್ಟಿರುತ್ತಿದ್ದರು. ಕನ್ಯಾಹತ್ಯೆ, ಕನ್ಯೆಯ ಮಾರಾಟ ಚೀನಾದಲ್ಲಿ ಬಹಳ ಪ್ರಚಾರದಲ್ಲಿತ್ತು. ವಿವಾಹವಾದ ಮೇಲೆ ಅವಳ ಪತಿಗೆ ಸೇರಿದವಳಾಗುತ್ತಿದ್ದಳು. ತಂದೆಯ ಮನೆಯ ಸಂಬಂಧ ಕಡಿಮೆಯಾಗುತ್ತಿತ್ತು.

ಪತಿಯನ್ನು ಆರಿಸಲು ಮತ್ತು ತನ್ನ ವಿವಾಹದ ವಿಷಯ ಮಾತಾಡಲು ಕನ್ಯೆಗೆ ಅಧಿಕಾರವಿರಲಿಲ್ಲ. ಮಾತಾ ಪಿತೃಗಳು ಅವರ ಇಚ್ಛೆಯಂತೆ ಯಾವ ಪುರುಷನಿಗಾದರೂ ಕೊಟ್ಟು ವಿವಾಹಮಾಡುತ್ತಿದ್ದರು. ಪ್ರೇಮ ವಿವಾಹಕ್ಕೆ ಅಡ್ಡಿಯಿತ್ತು. ಸ್ನೇಹದಿಂದ ವಿವಾಹಗಳನ್ನೇನೋ ಮಾಡಿಕೊಳ್ಳುತ್ತಿದ್ದರು; ಆದರೆ ಇಂತಹ ಸಂಬಂಧವು ಕೊನೆಗೆ ದುಃಖಕ್ಕೀಡಾಗುತ್ತಿತ್ತು. ಏಕೆಂದರೆ ತಂದೆ ತಾಯಿಗಳು ಮಕ್ಕಳ ಇಚ್ಛೆಯಂತೆ ವಿವಾಹ ಮಾಡಿಕೊಳ್ಳುವುದನ್ನು ಸಹಿಸುತ್ತಿರಲಿಲ್ಲ. ಎರಡು ಪರಿವಾರದವರು ಕನ್ಯೆ, ಮತ್ತು ಪುತ್ರರಿಗೆ ವಿವಾಹ ಮಾಡಬೇಕೆಂದು ನಿಶ್ಚಯಿಸುತ್ತಿದ್ದರು. ಆಗ ತಂದೆ ತಾಯಿಗಳು ತಮ್ಮ ಪುತ್ರಿಯನ್ನು ಭಾವೀ ಮಾವ ಅತ್ತೆಯ ಮನೆಗೆ ಕಳುಹಿಸುತ್ತಿದ್ದರು. ಅವರೇ ಅವರನ್ನು ಸಾಕುತ್ತಿದ್ದರು. ಗೃಹಿಣಿಯ ಶಿಕ್ಷಣವನ್ನು ಕೊಡುತ್ತಿದ್ದರು. ಬಾಲ್ಯವಿವಾಹ ಬಹಳ ಪ್ರಚಾರದಲ್ಲಿದ್ದಿತ್ತು. ವೇಶ್ಯಾವೃತ್ತಿಯೂ ಇತ್ತು. ವಿವಾಹವಾದಮೇಲೆ ಕನ್ಯೆಯೂ ವಧುವಿನ ಕರ್ತವ್ಯವನ್ನು ಪೂರ್ತಿಗೊಳಿಸಿ ಪತ್ನಿಯ ಕರ್ತವ್ಯವನ್ನು ನೆರವೇರಿಸಬೇಕಾಗಿತ್ತು.

ಕೇವಲ ಪತಿಯಲ್ಲದೆ ಮಾವ ಅತ್ತೆಯರೂ ಅವಳ ಮೇಲೆ ಅಧಿಕಾರ ನಡೆಸುತ್ತಿದ್ದರು. ಅವಳು ಆದರದಿಂದ ಅವರ ಸೇವೆಯನ್ನು ಮಾಡಬೇಕಾಗಿತ್ತು. ಅವರ ಆಜ್ಞೆಯನ್ನು ಪಾಲಿಸಬೇಕಾಗಿತ್ತು. ಅವರು ಎಚ್ಚರವಾಗಿರುವಾಗ, ಸೊಸೆಯು ತನ್ನ ಕೊಠಡಿಗೆ ಹೋಗಿ ಮಲಗುವುದು ತಪ್ಪಾಗಿತ್ತು. ಅತ್ತೆಯೊಡನೆ ಅವಳಿಗೆ ಹೆಚ್ಚು ಸಂಪರ್ಕವಿರುತ್ತಿತ್ತು. ಹಗಲು ಹೊತ್ತಿನಲ್ಲಿ ಪತಿಯೊಂದಿಗೆ ಹೆಚ್ಚು ಸಂಪರ್ಕವಿರುತ್ತಿರಲಿಲ್ಲ. ಸೊಸೆಯ ವಿಷಯದಲ್ಲಿ ಅತ್ತೆಯ ಕೆಟ್ಟ ವ್ಯವಹಾರವು ಚೀನಾದಲ್ಲಿ ಸಾಧಾರಣವಾಗಿತ್ತು. ಇದರಿಂದ ಬೇಸರಹೊಂದಿ ಸೊಸೆಯ ಆತ್ಮ ಹತ್ಯೆಯನ್ನು ಮಾಡಿಕೊಳ್ಳುತ್ತಿದ್ದಳು. ಚೀನೀ ಸಾಹಿತ್ಯವು ಈ ರೀತಿ ಕೆಟ್ಟ ವ್ಯವಹಾರದಿಂದ ತುಂಬಿತ್ತು. ಪರಿವಾರದಲ್ಲಿ ಆಂತರಿಕ ಕಲಹಗಳಿದ್ದವು. ಇದರ ಪರಿಣಾಮವಾಗಿ ಪರಿವಾರದ ಸದಸ್ಯರು ಬೇರೆ ವಾಸಿಸುತ್ತಿದ್ದರು.

ಒಂದು ವೇಳೆ ಪರಿವಾರದ ವೃದ್ಧ ಸ್ತ್ರೀ ಅಥವಾ ಪುರುಷರು ಕೆಲಸ ಮಾಡಲು ಅಸಮರ್ಥರಾದರೆ, ಯುವಕರು ಅವರನ್ನು ನೋಡಿಕೊಳ್ಳಬೇಕಾಗಿತ್ತು.

ಪರಿವಾರದ ಮುಖಂಡನ ಪತ್ನಿಯು ಮನೆಯ ಒಳಗೆ ಪ್ರಧಾನಿಯಾಗಿರುತ್ತಿದ್ದಳು. ಆಗಲೇ ಅವಳ ವಾಸ್ತವಿಕ ಪತ್ನೀರೂಪವು ಕಾಣುತ್ತಿತ್ತು. ಏಕೆಂದರೆ ಅತ್ತೆ ಮಾವಂದಿರಿದ್ದಾಗ ಸೊಸೆಯಾಗಿದ್ದಳು. ಪತ್ನಿಯ ಪ್ರಧಾನ ಕರ್ತವ್ಯವು ಪತಿಯ ಸೇವೆ ಮಾಡುವುದು. ಅವನ ಆಜ್ಞೆಯನ್ನು ಪಾಲಿಸುವುದು.

ಚೀನೀ ಸಮಾಜದಲ್ಲಿ ವಿವಾಹದ ಉದ್ದೇಶ್ಯವು ಸಂತಾನವೃದ್ಧಿಯಾಗಿತ್ತು. ಸಂತೋಷ ಸುಖಕ್ಕಲ್ಲ. ಒಂದು ವೇಳೆ ಸಂತಾನದ ಜೊತೆಗೆ ಸಂತೋಷ ವಿದ್ದರೂ ಒಳ್ಳೆಯದು. ಇಲ್ಲದಿದ್ದರೆ ಅದು ತಪ್ಪಾಗಿರಲಿಲ್ಲ. ಹೀಗೆ ಸ್ತ್ರೀಯರು ವಂಶವನ್ನು ವೃದ್ಧಿಗೊಳಿಸುತ್ತಿದ್ದರು. ಮನೆಯ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು.

ಚೀನಾದಲ್ಲಿ ವೇಶ್ಯೆಯರನ್ನು ಇಟ್ಟುಕೊಳ್ಳುವ ಪದ್ಧತಿಯು ಬಹಳ ಪ್ರಾಚೀನ ಕಾಲದಿಂದ ಇತ್ತು. ಆದರೆ ಈಗ ಅಳಿಸಿ ಹೋಗಿದೆ. ಮೊದಲು ಪ್ರತಿ ಐಶ್ವರ್ಯ ವಂತರೂ ಇದನ್ನು ಅನುಸರಿಸುತ್ತಿದ್ದರು. ಇದು ಐಶ್ವರ್ಯದ ಮತ್ತು ಗೌರವದ ಮಾತಾಗಿತ್ತು. ಆದುದ ರಿಂದ ಉಚ್ಚ ಮತ್ತು ಮಧ್ಯಮ ವರ್ಗದ ವಿವಾಹಿತ ಸ್ತ್ರೀಯರು ಈ ವೇಶ್ಯಾಸ್ತ್ರೀಯರನ್ನು ಎದುರಿಸಬೇಕಾ ಗುತ್ತಿತ್ತು. ಆರ್ಥಿಕ ಅಭಾವದಿಂದ ನಿಮ್ನ ವರ್ಗದಲ್ಲಿ ಈ ಪದ್ಧತಿಯು ಕಡಿಮೆಯಾಗಿತ್ತು. ವೇಶ್ಯೆಯರು ಆರ್ಥಿಕ ಕಾರಣದಿಂದ ಈ ರೀತಿಯ ಉದ್ಯೋಗಮಾಡು ತ್ತಿದ್ದರು. ಅವರು ನಿಮ್ನವರ್ಗದವರಾಗಿರುತ್ತಿದ್ದರು. ಆದರೆ ಪುರುಷರು ವಿವಾಹವಾದ ಮೇಲೆಯೇ ಈ ಪದ್ಧತಿ ಯನ್ನು ಅನುಸರಿಸಬೇಕಾಗುತ್ತಿತ್ತು. ಆ ವೇಶ್ಯೆಯರನ್ನು ಆರಿಸಲು ಪುರುಷರು ಸ್ವತಂತ್ರರಾಗಿದ್ದರು. ಮಾತಾ ಪಿತೃಗಳು ಇದಕ್ಕೆ ಅಡ್ಡಿ ಬರುತ್ತಿರಲಿಲ್ಲ. ಆದರೆ ಅವರು ಇಷ್ಟಪಟ್ಟ ಕನ್ಯೆಯನ್ನೇ ಪುರುಷರು ವಿವಾಹವಾಗ ಬೇಕಾಗಿತ್ತು. ಆದುದರಿಂದ ಇಷ್ಟಬಂದ ವೇಶ್ಯೆಯಮೇಲೆ ಹೆಚ್ಚು ಪ್ರೇಮವಿರುತ್ತಿತ್ತು. ಆದರೆ ಪರಿವಾರದಲ್ಲಿ ವೇಶ್ಯೆಯ ಸ್ಥಾನವು ಪತ್ನಿಯ ಸ್ಥಾನಕ್ಕಿಂತ ಕೀಳಾಗಿತ್ತು. ಸಾಮಾನ್ಯವಾಗಿ ಇಬ್ಬರಲ್ಲೂ ಕಲಹವಾಗುತ್ತಿತ್ತು. ಆದರೆ ವೇಶ್ಯೆಯು ಇದನ್ನು ಸಹಿಸಿಕೊಂಡಿರಬೇಕಾಗಿತ್ತು. ವೇಶ್ಯೆಯನ್ನು ಇಟ್ಟುಕೊಳ್ಳಲು ಪತ್ನಿಯು ಅಡ್ಡಿ ಬರ ಕೂಡದಾಗಿತ್ತು. ಆದರೆ ಅವಳಿಗೆ ಮನಸ್ಸಿನಲ್ಲಿ ನಿಜ ವಾಗಿಯೂ ಇಷ್ಟವಿರುತ್ತಿರಲಿಲ್ಲ. ಒಂದು ಪದ್ಧತಿಯು ಕೆಟ್ಟದ್ದಾಗಿದ್ದರೂ ಅಭ್ಯಾಸವಾದಮೇಲೆ ಅದನ್ನು ಬಿಡು ತ್ತಿರಲಿಲ್ಲ. ಈ ರೀತಿ ಒಬ್ಬ ಪುರುಷನು ಒಬ್ಬಳಿಗಿಂತ ಹೆಚ್ಚುಮಂದಿ ವೇಶ್ಯೆಯರನ್ನು ಇಟ್ಟುಕೊಳ್ಳಬಹು ದಾಗಿತ್ತು.

ಸಮಾಜದಲ್ಲಿ ತಾಯಿ, ದಾದಿಯರಂತಹ ವೃದ್ಧ ಸ್ತ್ರೀಯರಿಗೆ ಬಹಳ ಗೌರವವಿತ್ತು. ಅವರು ಸಜ್ಜನತೆಯ ಪ್ರತೀಕವೆಂದು ಜನರು ತಿಳಿಯುತ್ತಿದ್ದರು. ತಾಯಿ ಮತ್ತು ತಂದೆಯ ಮಧ್ಯೆ ಕಲಹವಾದರೆ ಪುತ್ರನು ತಂದೆಯ ಪಕ್ಷವನ್ನು ವಹಿಸಬೇಕಾಗುತ್ತಿತ್ತು. ತಂದೆಯ ಮರಣದ ನಂತರ ತಾಯಿಯು ಪುತ್ರನ ಆಧೀನದಲ್ಲಿರಬೇಕಾಗು ತ್ತಿತ್ತು. ತಮ್ಮ ಯೋಗ್ಯತೆ ಮತ್ತು ಬುದ್ಧಿಯಿಂದ ತಮ್ಮ ಪುತ್ರರಿಗೆ ದೊಡ್ಡ ಸ್ಥಾನವನ್ನು ಗಳಿಸಿ ಕೊಟ್ಟಂತಹ ತಾಯಿಯರು ಅನೇಕರಿದ್ದರು.

ಸಮಾಜದಲ್ಲಿ ವಿಧವೆಯರ ಸ್ಥಿತಿ ಚೆನ್ನಾಗಿರಲಿಲ್ಲ. ಅವರಿಗೆ ಪುನರ್ವಿವಾಹವು ಅಗೌರವವೆಂದು ತಿಳಿಯು ತ್ತಿದ್ದರು. ಆದುದರಿಂದ ಅವರು ಪುನರ್ವಿವಾಹ ಮಾಡಿಕೊಳ್ಳುತ್ತಿರಲಿಲ್ಲ. ಪತಿಯು ಸತ್ತು ಹೋದಮೇಲೂ ಕೂಡ ಅವರ ಆತ್ಮವು ತಮ್ಮ ಪತ್ನಿಯ ಸೇವೆಯನ್ನು ಆಶಿಸುತ್ತದೆಯೆಂದೂ ಮತ್ತು ಪತ್ನಿಯ ಮೇಲೆ ಅಧಿಕಾರ ಮಾಡುತ್ತದೆಯೆಂದೂ ಜನರ ನಂಬಿಕೆ. ಆದುದರಿಂದ ವಿಧವಾ ವಿವಾಹ ಪ್ರಚಾರದಲ್ಲಿರಲಿಲ್ಲ. ಪುನಃ ವಿವಾಹ ಮಾಡಿಕೊಳ್ಳದೇ ಜೀವನವೆಲ್ಲಾ ವಿಧವೆಯಾಗಿ ಕಳೆದು ಸತ್ತು ಹೋದಮೇಲೆ ಅವಳ ಸಮಾಧಿಯ ಮೇಲೆ ಸ್ಮಾರಕ ವಾಗಿ ಕಲ್ಲಿನ ಹಲಗೆಗಳನ್ನು ಹಾಸಿ ಅದರ ಮೇಲೆ ಅವಳ ಗುಣ ಕಥನವನ್ನು ಬರೆಯುತ್ತಿದ್ದರು. ಚೀನಾದಲ್ಲಿ ಇಂತಹ ಸ್ಮಾರಕಗಳು ಸಾವಿರಾರು ಇವೆ. ಆದರೆ ಸ್ತ್ರೀಯು ಸತ್ತಮೇಲೆ ಪುರುಷನು ತಕ್ಷಣ ವಿವಾಹ ಮಾಡಿ ಕೊಳ್ಳುತ್ತಿದ್ದನು.

ಪುನಃ ವಿವಾಹಕ್ಕೆ ಇಷ್ಟಪಟ್ಟ ಸ್ತ್ರೀಯು, ಪತಿಯ ಮರಣವಾದನಂತರದ ಮೂರು ವರ್ಷಗಳಾದ ಮೇಲೆ ವಿವಾಹಮಾಡಿಕೊಳ್ಳಬಹುದಾಗಿತ್ತು. ಏಕೆಂದರೆ ಚೀನಾ ದಲ್ಲಿ ಮರಣ ಹೊಂದಿದ ಮೇಲೆ ಆಶೌಚವು ಮೂರು ವರ್ಷಗಳವರೆಗೆಂದು ತಿಳಿದಿದ್ದಾರೆ.

ಚೀನೀಸ್ತ್ರೀಯರ ಪಾಪ ಪುಣ್ಯಗಳ ವಿಷಯವು ಮನೋರಂಜಕವಾಗಿದೆ. ಸ್ತ್ರೀಯರು ಪುಣ್ಯವನ್ನು ಸಂಪಾದಿಸುವ ರೀತಿ ಹೀಗಿದ್ದಿತು :–

ಸ್ತ್ರೀಯು ಮಾವ ಅತ್ತೆಗೆ ಕರ್ತವ್ಯ ಪರಾಯಣ ಳಾಗಿ, ಆಜ್ಞಾಕಾರಿಣಿಯಾಗಿ, ಪತಿಯ ಸೇವೆ ಮಾಡು ತ್ತಿದ್ದರೆ ದಿನವೂ ಒಂದು ಪುಣ್ಯ ಸಂಪಾದಿಸಿದಂತಾಗು ತ್ತಿತ್ತು. ಪತಿ, ಮಾವ, ಅತ್ತೆಯ ಕಾಯಿಲೆಗಳಲ್ಲಿ ಸೇವೆ

ಮಾಡಿದರೆ ದಿನವೂ ಒಂದು ಪುಣ್ಯ. ಪತಿಯ ಅತ್ಯಾಚಾರವನ್ನು ಸಹಿಸಿ ಕೊಂಡಿದ್ದರೆ ಮೂರರಷ್ಟು ಪುಣ್ಯ.

ಪಾಪದ ಲೆಕ್ಕಾಚಾರವು ಹೀಗಿತ್ತು:- ಪತಿಯು ಒಳ್ಳೆಯ ಕೆಲಸ ಮಾಡಿದಾಗ ಪತ್ನಿಯು ವಿರುದ್ಧವಾಗಿ ಮಾತಾಡಿದರೆ, ಅಥವಾ ಕೆಟ್ಟ ಕೆಲಸ ಮಾಡಲು ಪ್ರೇರೇಪಿಸಿದರೆ, ಪ್ರತಿಯೊಂದು ಶಬ್ದಕ್ಕೂ ಒಂದೊಂದು ಪಾಪ. ನೆರೆಹೊರೆಯವರ ಜೊತೆಗೆ ಶಾಂತಿಯಿಂದ ವಾಸಿಸದಿದ್ದರೆ ಒಂದು ಪಾಪ. ಯಾರ ಜೊತೆಯಲ್ಲಾದರೂ ಇಸ್ಪೀಟು ಆಡಿದರೆ ಪ್ರತಿ ಬಾರಿಯೂ ಐದರಷ್ಟು ಪಾಪ. ಕೊಳಕಾದ ವಸ್ತು ಅಥವಾ ದೃಶ್ಯವನ್ನು ನೋಡಲು ಹೋದರೆ ಮೂರರಿಂದ ಹತ್ತರ ವರೆಗೂ ಪಾಪ. ಬರೆದ ಅಥವಾ ಮುದ್ರಣವಾದ ಕಾಗದದ ಮೇಲೆ ಸೂಜಿದಾರ ಇಟ್ಟರೆ ಮೂರರಷ್ಟು ಪಾಪ. ಪತಿಯು ಕುರೂಪಿಯೆಂದು ತಿರಸ್ಕರಿಸಿದರೆ ಒಂದು ಸಾವಿರ ಪಾಪ. ಈ ರೀತಿ ಚೀನೀಸ್ತ್ರೀಯರ ಪಾಪ ಪುಣ್ಯದ ಲೆಕ್ಕಾಚಾರ ಇಡಬೇಕಾಗಿ ಬರುತ್ತಿತ್ತು.

ಪ್ರಾಚೀನಕಾಲದಲ್ಲಿ ಚೀನಾದಲ್ಲಿ ಸ್ತ್ರೀಶಿಕ್ಷಣ ಪ್ರಚಾರದಲ್ಲಿರಲಿಲ್ಲ. ಉಚ್ಚ, ಮಧ್ಯಮ ಮತ್ತು ನಿಮ್ನ ವರ್ಗದ ಸ್ತ್ರೀಯರು ಕೂಡ ನಿರಕ್ಷರರಾಗಿರುತ್ತಿದ್ದರು. ಕೆಲವು ವಿದ್ವಾಂಸ ಪರಿವಾರದಲ್ಲಿ ಸ್ತ್ರೀಯರಿಗೆ ಅವಶ್ಯಕವಾಗಿ ಶಿಕ್ಷಣಕೊಡುತ್ತಿದ್ದರು. ಕಲೆ, ಕಾವ್ಯ, ಇತಿಹಾಸ, ಮುಂತಾದ ಕ್ಷೇತ್ರಗಳಲ್ಲಿ ತಮ್ಮ ಅಮರ ಕೃತಿಗಳನ್ನು ಬಿಟ್ಟಂತಹ ಉಚ್ಚ ಕೋಟಿಯ ವಿದುಷಿಯರೂ ಇದ್ದರು. ಪ್ರಾಚೀನ ಕಾಲದಲ್ಲಿ ಸ್ತ್ರೀವಿದ್ಯಾಭ್ಯಾಸದ ವಿಚಾರದಲ್ಲಿ ಈ ರೀತಿಯ ನಂಬಿಕೆಯಿತ್ತು. "ವಿದ್ಯಾವಂತಳಾದ ಸ್ತ್ರೀಯು ಪರಿವಾರದಲ್ಲಿ ತೊಂದರೆಯನ್ನುಂಟುಮಾಡುತ್ತಾಳೆ. ಅಜ್ಞಾನಿಯಾದ ಸ್ತ್ರೀಯು ಧಾರ್ಮಿಕಳಾಗಿರುತ್ತಾಳೆ." ಈ ರೀತಿಯ ಭಾವನೆಯೇ ಕಾರಣವಾಗಿ ಸ್ತ್ರೀವಿದ್ಯಾಭ್ಯಾಸವು ಪ್ರಚಾರದಲ್ಲಿರಲಿಲ್ಲ. ಬಾಲ್ಯದಿಂದಲೇ ಅವರಿಗೆ ಬಟ್ಟೆ ನೇಯುವುದು, ಬಟ್ಟೆಯ ಚಪ್ಪಲಿ ಮಾಡುವುದು, ಅಡಿಗೆ ಮಾಡುವುದು, ಮಕ್ಕಳನ್ನು ನೋಡಿಕೊಳ್ಳುವುದು, ತಂದೆ, ತಾಯಿ, ಅತ್ತೆ, ಮೂವರ ಸೇವೆ ಮಾಡುವುದು, ಸಚ್ಚರಿತ್ರರಾಗಿರುವುದು, ನಯ ವಿನಯವತಿಯರಾದ ಮಧುರ ಭಾಷಿಣಿಯರಾಗಿರುವುದು, ಮುಂತಾದ ಶಿಕ್ಷಣವನ್ನು ಕೊಡುತ್ತಿದ್ದರು.

ಚೀನಾದಂತಹ ವಿಶಾಲ ದೇಶದಲ್ಲಿ ಒಂದೇ ವಿಧವಾದ ನಡೆನುಡಿ, ಸಾಮಾಜಿಕ ಜೀವನವಿರುವುದು ಅಸಂಭವ. ಆದರೆ ಸಾಮಾನ್ಯವಾಗಿ ಮೇಲೆ ಹೇಳಿರುವ ಚೀನಾಸ್ತ್ರೀಯರ ವಿಷಯ, ದೇಶಾದ್ಯಂತ ಇದೆ. ದಕ್ಷಿಣ ಚೀನಾದಲ್ಲಿ ಸ್ತ್ರೀಯರು ಜಮೀನಿನಲ್ಲಿ ಕೂಲಿ ಕೆಲಸ ಮಾಡುತ್ತಿದ್ದರು. ಈ ರೀತಿ ಸ್ಥಾನ ಮತ್ತು ವರ್ಗದಲ್ಲಿ ಅಂತರವಿತ್ತು. ಹೀಗೆ ಕೆಲಸ ಮಾಡುವ ಸ್ತ್ರೀಯರಲ್ಲಿ ಕಾಲು ಕಟ್ಟುವ ಪದ್ಧತಿಯಿರಲಿಲ್ಲ. ಮೇಲಿನ ವಿವರಣೆಯಿಂದ ಪ್ರಾಚೀನ ಚೀನೀಸ್ತ್ರೀಯರ ಸ್ಥಿತಿಯು ಸುಮಾರು ಭಾರತೀಯ ಸ್ತ್ರೀಯರ ಸ್ಥಿತಿಯಂತಿತ್ತೆಂದು ತಿಳಿದು ಬರುತ್ತದೆ. ಪತಿ ಅಥವಾ ಪರಿವಾರದ ಮುಖಂಡನಾದ ಪುರುಷನ ಪ್ರಸನ್ನತೆಯಂತೆ ಅವರು ಜೀವಿಸಬೇಕಾಗುತ್ತಿತ್ತು. ಈ ರೀತಿಯ ಬಂಧನದ ಮಧ್ಯೆ ಕೂಡ ಚೀನಾ ಇತಿಹಾಸದಲ್ಲಿ ದೇಶವು ಗರ್ವಪಡುವಂತಹ ಪತ್ನಿಯರ, ಮಾತೆಯರ, ವಿಧವೆಯರ, ಕನ್ಯೆಯರ ವರ್ಣನೆ ಇದೆ.

---








# ಸ್ವೀಕಾರ

ವಸಂತ ಕುಸುಮಾಂಜಲಿ (ಕವನಸಂಗ್ರಹ) ಕವಿಗಳು: ಶ್ರೀ ಡಿ. ವಿ. ಜಿ. ಅವರು; ಪ್ರಕಾಶಕರು: ಕಾವ್ಯಾಲಯ, ಮೈಸೂರು; ಕಿರೀಟಾಕಾರದ ಅಷ್ಟಪತ್ರ; ಪುಟ: ೪೮ ಬೆಲೆ: ಹನ್ನೆರಡಾಣೆ.

ಮಹಾ ಚುನಾವಣೆ (ಲಾವಣಿ) ಬರೆದವರು: ಶ್ರೀ ಡಿ.ವಿ.ಜಿ. ಅವರು; ಪ್ರಕಾಶಕರು: ಕಾವ್ಯಾಲಯ, ಮೈಸೂರು; ಕಿರೀಟಾಕಾರದ ಅಷ್ಟಪತ್ರ; ಪುಟ: ೧೬ ಬೆಲೆ: ನಾಲ್ಕಾಣೆ.

ಲೂಯಿ ಪ್ಯಾಶ್ಚರ್ (ಜೀವನಚರಿತ್ರೆ) ಬರೆದವರು: ಶ್ರೀ ಎಸ್.ವಿ. ಕೃಷ್ಣಮೂರ್ತಿರಾಯರು; ಪ್ರಕಾಶಕರು: ಕಾವ್ಯಾಲಯ ಮೈಸೂರು; ಕಿರೀಟಾಕಾರದ ಅಷ್ಟಪತ್ರ; ಪುಟ: ೧೪೭ ಬೆಲೆ: ರೂ. ೨-೪-೦

ವಿಜಯನಗರ ಸಾಮ್ರಾಜ್ಯ ಚರಿತ್ರೆ, (ಚರಿತ್ರೆ) ಬರೆದವರು: ಶ್ರೀ ವಿ.ಆರ್. ಹನುಮಂತಯ್ಯನವರು; ಪ್ರಕಾಶಕರು: ಶ್ರೀ ವಿ.ಆರ್. ಹನುಮಂತಯ್ಯ, ನಂ. ೧೧೨, ಶ್ರೀ ಬೀರದೇವರಗುಡಿ ಬೀದಿ, ರಾಜಾಸಿಂಗ್‌ಪೇಟೆ; ಬೆಂಗಳೂರು ೨; ಕಿರೀಟಾಕಾರದ ಅಷ್ಟಪತ್ರ; ಪುಟ: x+ ೧೦೩ ಬೆಲೆ: ರೂ. ೧-೮-೦.

ಏಕಾಂಕ ನಾಟಕಗಳು (ಪ್ರಹಸನಗಳು) ಲೇಖಕರು: ಶ್ರೀ ಶ್ರೀ ವ್ಯಾಸರಾಜ ಮಠದ ವಿದ್ಯಾಸಿಂಹಾಸನಾಧೀಶ್ವರರಾದ, ಶ್ರೀಮದ್ವಿದ್ಯಾ ಶ್ರೀ ಪ್ರಸನ್ನ ತೀರ್ಥ ಶ್ರೀ ಪಾದಂಗಳವರು; ಪ್ರಕಾಶಕರು: ಶ್ರೀ ಚಂದ್ರಿಕಾ ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್; ವ್ಯಾಸರಾಜಪುರ. ಕಿರೀಟಾಕಾರದ ಅಷ್ಟಪತ್ರ; ಪುಟ: ೧೮೯; ಬೆಲೆ: ಹನ್ನೆರಡಾಣೆ.

ದುಂಬಿ (ಕವನಸಂಗ್ರಹ) ಲೇಖಕರು ಮತ್ತು ಪ್ರಕಾಶಕರು: ಆಸ್ಥಾನವಿದ್ವಾನ್, ಪಂಡಿತರತ್ನಂ, ಕೀರ್ತನಾಚಾರ್ಯ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳು ಬೆಂಗಳೂರು ೨; ಕಿರೀಟಾಕಾರದ ಅಷ್ಟಪತ್ರ: ಪುಟ: ೬೩; ಬೆಲೆ: ರೂ. ೧-೦-೦.

ಶ್ರೀ ರಮಣಮಹರ್ಷಿ (ಜೀವನಚರಿತ್ರೆ) ಲೇಖಕರು: ಶ್ರೀ ಅರ್ಚಕ ವೆಂಕಟೇಶ ಮತ್ತು ಶ್ರೀ ಎಚ್. ಎಸ್. ರೇಣುಕ ಪ್ರಸಾದ್ ಅವರು; ಪ್ರಕಾಶಕರು: ವಿದ್ಯಾರ್ಥಿ ಪ್ರಕಟನಾಲಯ, ಬೆಂಗಳೂರು ೨. ಕಿರೀಟಾಕಾರದ ಅಷ್ಟಪತ್ರ; ಪುಟ: ೯೮ ಬೆಲೆ: ರೂ. ೧-೦-೦.

ವಿಶ್ವಪ್ರೇಮಿ (ಕಾದಂಬರಿ) ಬರೆದವರು: ಶ್ರೀ ರಾ.ನೋ. ವಿಶ್ವಾಮಿತ್ರ; ಪ್ರಕಾಶಕರು: ವಿವೇಕಸಾಹಿತ್ಯ ಮಾಲೆ, ಮಂಗಳೂರು ೩ ಕಿರೀಟಾಕಾರದ ಅಷ್ಟಪತ್ರ; ಪುಟ: ೧೫೮ ಬೆಲೆ: ರೂ. ೨-೦-೦.

ಭಾಗ್ಯೋದಯ ಚಂದ್ರಿಕೆ (ತತ್ತ್ವ) ಬರೆದವರು: ಶ್ರೀ ಗವೀಸ್ವಾಮಿಗಳು ಪ್ರಕಾಶಕರು: ಮಹಾಮನೆ ಪ್ರಕಟನಾಲಯ; ೨೫೨೬, ಚಾಮುಂಡೀಪುರಂ, ಮೈಸೂರು; ಕಿರೀಟಾಕಾರದ ಅಷ್ಟಪತ್ರ; ಪುಟ: ೪೭ ಬೆಲೆ: ರೂ. ೧-೦-೦.

ಕನ್ನಡ ನ್ಯಾಯ ಶತಕಮ್ (ಕಾವ್ಯ) ಕವಿಗಳು—ಶ್ರೀ ||ಷ|| ಬ್ರ|| ಗಂಗಾಧರಶಿವಾಚಾರ್ಯ ಮಹಾಸ್ವಾಮಿಗಳವರು; ಪ್ರಕಾಶಕರು: ಶ್ರೀ ಜಗದ್ಗುರು ವಿಶ್ವಾರಾಧ್ಯಸೇವಾಶ್ರಮ ಬೈಲವದ್ಗಿರಿ ಪಾಹಿ ನಾಯಕನಹಳ್ಳಿ, ತಾಲ್ಲೂಕು, ಹೊಸಪೇಟೆ. ಕಿರೀಟಾಕಾರದ ಅಷ್ಟಪತ್ರ; ಪುಟ: ೨೫ ಬೆಲೆ: ಹನ್ನೆರಡಾಣೆ.

ಲಂಗ್ಡ ಲಕ್ಪತಿ—ಅಂಧ ಹಿಕ್ಮತಿ (ನಾಟಕ) ಬರೆದವರು: ಶ್ರೀ ಸ್ವಾಮಿ ಅವರು; ಮಹಾಮನೆ ಪ್ರಕಟನಾಲಯ ೨೫೨೬. ಚಾಮುಂಡಿಪುರಂ, ಮೈಸೂರು; ಕಿರೀಟಾಕಾರದ ಅಷ್ಟಪತ್ರ; ಪುಟ: ೫೨ ಬೆಲೆ: ರೂ. ೧-೦-೦.

ಭಗವದ್ಗೀತೆ (ಕನ್ನಡ ಪದ್ಯಾನುವಾದ) ಅನುವಾದಕರು: ಶ್ರೀ ಪು. ತಿ. ನರಸಿಂಹಾಚಾರ್ಯರು; ಪ್ರಕಾಶಕರು: ಜೀವನ ಕಾರ್ಯಾಲಯ, ಬಸವನಗುಡಿ, ಬೆಂಗಳೂರು ೪. ಕಿರೀಟಾಕಾರದ ಅಷ್ಟಪತ್ರ; ಪುಟ: ೮೭ ಬೆಲೆ: ರೂ. ೧-೮-೦.

ಜ್ಯೋತಿ (ಅಧ್ಯಾತ್ಮ); ಪ್ರಕಾಶಕರು: ಶ್ರಿರಾಮಕೃಷ್ಣಾಶ್ರಮ ಬಸವನಗುಡಿ, ಬೆಂಗಳೂರು ನಗರ; ಡೆಮ್ಮಿ ೧/೧೬ ಆಕಾರ ಪುಟ: ೬೩; ಬೆಲೆ: ಎಂಟಾಣೆ.

ವಿಜಯನಾದ (ಕವನಸಂಗ್ರಹ) ಬರೆದವರು: ಶ್ರೀ ಅಮರವಾಣಿ; ಪ್ರಕಾಶಕರು: ಸಾಹಿತ್ಯಕುಟೀರ, ಕೋಟೆ, ಬೆಂಗಳೂರು. ಕಿರೀಟಾಕಾರದ ಅಷ್ಟಪತ್ರ; ಪುಟ: ೪೮ ಬೆಲೆ: ಎಂಟಾಣೆ.

ವಚನಮಂಜರಿ (ವಚನ) ಗ್ರಂಥಕರ್ತರು: ಶ್ರೀ ಜ. ಪ. ಚನ್ನಬಸವರಾಜ ದೇಶಿಕೇಂದ್ರ ಶಿವಾಚಾರ್ಯರು; ಪ್ರಕಾಶಕರು: ಪ್ರಬೋಧ ಪುಸ್ತಕಮಾಲೆ, ಚಾಮರಾಜಪೇಟೆ, ಬೆಂಗಳೂರು.

ಶ್ರೀ ನಿಡುಮಾಮಿಡಿ ಸನ್ನಿಧಿಯವರು (ಜೀವನಚರಿತ್ರೆ) ಬರೆದವರು: ಶ್ರೀ ಅ. ನ. ಕೃಷ್ಣರಾಯರು; ಪ್ರಕಾಶಕರು: ಪ್ರಬೋಧ ಪುಸ್ತಕಮಾಲೆ, ಚಾಮರಾಜಪೇಟೆ, ಬೆಂಗಳೂರು ನಗರ; ಕಿರೀಟಾಕಾರದ ಅಷ್ಟಪತ್ರ; ಪುಟ: ೧೩೩+೩೮ ಬೆಲೆ: ರೂ. ೨-೦-೦.

ಶ್ರೀ ಪಂಡಿತಾರಾಧ್ಯ ಮೂಲ ಪೀಠಮು (ತೆಲುಗು) (ಜೀವನ ಚರಿತ್ರೆ) ಬರೆದವರು: ಶ್ರೀ ಅಕ್ಕುಲಯ್ಯ ದೀಕ್ಷಿತರು, ಮದನಪಳ್ಳಿ; ಪ್ರಕಾಶಕರು ಮತ್ತು ಸಂಪಾದಕರು: "ಶ್ರೀ" ಪತ್ರಿಕಾ ಕಾರ್ಯಾಲಯ ಮದನಪಳ್ಳಿ; ಕಿರೀಟಾಕಾರದ ಅಷ್ಟಪತ್ರ; ಪುಟ: ೩೬ ಬೆಲೆ: ಎಂಟಾಣೆ.

ಕೈವಲ್ಯೋಪನಿಷತ್ – ಸದಾಶಿವಭಾಷ್ಯ (ಉಪನಿಷತ್) ಸಂಪಾದಕರು: ಶ್ರೀ ಎಂ. ಜಿ. ನಂಜುಂಡಾರಾಧ್ಯರು; ಕಿರೀಟಾಕಾರದ ಅಷ್ಟಪತ್ರ; ಪುಟ: ೪೩+೪+೯೭+೧೨ ಬೆಲೆ: ರೂ. ೨-೮-೦.

ಮುದ್ದು ಸಿಂಗಾರಿ (ಬಾಲಕಿರಣ ಮಾಲೆ) ಬರೆದವರು: ಶ್ರೀ ಬಿ. ಶ್ರೀ ಪಾಂಡುರಂಗರಾವ್ ಅವರು; ಪ್ರಕಾಶಕರು: ಮಕ್ಕಳ ಮಂಟಪ, ನೆಹರುನಗರ .ಶೇಷಾದ್ರಿಪುರ ಹೊಸಬಡಾವಣೆ, ಬೆಂಗಳೂರು ೨; ಕಿರೀಟಾಕಾರದ ಅಷ್ಟಪತ್ರ; ಪುಟ: ೨೬ ಬೆಲೆ: ಆರಾಣೆ.

ಕನ್ನಡ ಆದಿತ್ಯಪುರಾಣಂ ಭಾಗ ೧ (ಪುರಾಣ) ಸಂಗ್ರಾಹಕರು: ಶ್ರೀ ಕೆ. ವೆಂಕಟರಾಯಾಚಾರ್ಯರು; ಪ್ರಕಾಶಕರು ಮತ್ತು ಸಂಪಾದಕರು: ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ ಅವರು ಬೆಂಗಳೂರು ನಗರ; ಡೆಮ್ಮಿ ಎಂಟರ ಆಕಾರ; ಪುಟ: ೭೧ ಬೆಲೆ ರೂ. ೧-೦-೦.

ನಾನು–ನೀನು (ತತ್ತ್ವ) ಬರೆದವರು: ಶ್ರೀ ಜ. ಪ. ಚನ್ನಬಸವರಾಜದೇಶಿಕೇಂದ್ರ ಶಿವಾಚಾರ್ಯರು, ಗೂಳೂರು; ಪ್ರಕಾಶಕರು: ಪ್ರಬೋಧ ಪುಸ್ತಕಮಾಲೆ, ಚಾಮರಾಜಪೇಟೆ, ಬೆಂಗಳೂರು; ಪೂಲ್ಸ್‌ಕ್ಯಾಪ್, ೧/೧೬ ಆಕಾರ; ಪುಟ: ೪೦ ಬೆಲೆ: ನಾಲ್ಕಾಣೆ.

ನಾವು ಕಂಡ ಚೀನ (ಇಂದಿನ ಚೀನಾ ದೇಶದ ಕುರಿತು ಲೇಖನಗಳು) ಬರೆದವರು: ಚೀನಾಕ್ಕೆ ಹೋಗಿದ್ದ ಭಾರತ ಸೌಹಾರ್ದ ನಿಯೋಗದವರು; ಪ್ರಕಾಶಕರು: ಇಂಡಿಯಾ–ಚೀನ ಸ್ನೇಹ ಸಂಘ; ಮೈಸೂರು; ಕಿರೀಟಾಕಾರದ ಅಷ್ಟಪತ್ರವು; ಪುಟ: ೫೨ ಬೆಲೆ: ನಾಲ್ಕಾಣೆ.



ಸಂಪುಟ ೧೫ ]  ಫೆಬ್ರವರಿ ೧೯೫೨  [ ಸಂಚಿಕೆ ೨

## ಶ್ರೀ ಕಾ. ಸ. ಧರಣೇಂದ್ರಯ್ಯನವರಿಗೆ ತಿಪಟೂರಿಗೆ ವರ್ಗ

ಶ್ರೀ ಕಾ. ಸ. ಧರಣೇಂದ್ರಯ್ಯನವರು ಇದುವರೆಗೂ ಪರಿಷತ್ತಿನ ಗೌ॥ ಕಾರ್ಯದರ್ಶಿಗಳಾಗಿದ್ದು ತಮಗೆ ತಿಪಟೂರಿಗೆ ವರ್ಗವಾಗಿರುವ ನಿಮಿತ್ತ ಕಾರ್ಯದರ್ಶಿಗಳ ಸ್ಥಾನಕ್ಕೆ ರಾಜೀನಾಮೆಯನ್ನು ಕೊಟ್ಟಿರುತ್ತಾರೆ. ಅವರ ರಾಜೀನಾಮೆಯನ್ನು ಅಧ್ಯಕ್ಷರು ವಿಷಾದದಿಂದ ಅಂಗೀಕರಿಸಿದ್ದಾರೆ. ಶ್ರೀ ಧರಣೇಂದ್ರಯ್ಯನವರಿಗೆ ಕಳೆದ ವರ್ಷ ಗೃಹಕೃತ್ಯದ ಮತ್ತು ಇತರ ತೊಂದರೆಗಳು ಹಲವು ಒದಗಿದ್ದರೂ ಅವರು ಪರಿಷತ್ತಿನ ಜವಾಬ್ದಾರಿಯನ್ನು ಬಿಡದೆ ನಿರ್ವಹಿಸಿದರು. ಅದಕ್ಕಾಗಿ ಅಧ್ಯಕ್ಷರು ಪರಿಷತ್ತಿನ ಪರವಾಗಿ ಅವರಿಗೆ ಕೃತಜ್ಞತೆಯನ್ನು ತಿಳಿಸ ಬಯಸುತ್ತಾರೆ.

ಈಗ ಹೊಸ ಕಾರ್ಯದರ್ಶಿಗಳನ್ನು ಇನ್ನೂ ನೇಮಕಮಾಡಿಲ್ಲ. ಸದ್ಯಕ್ಕೆ ಗೌ॥ ಕೋಶಾಧಿಕಾರಿಗಳಾದ ಶ್ರೀ ಸಿ. ಕೆ. ನಾಗರಾಜರಾಯರೇ ತಮ್ಮ ಕೆಲಸದ ಜತೆಗೆ ಕಾರ್ಯದರ್ಶಿಗಳ ಕೆಲಸವನ್ನೂ ನೋಡಿಕೊಂಡು ಹೋಗುವಂತೆ ಅಧ್ಯಕ್ಷರು ಏರ್ಪಾಟು ಮಾಡಿದ್ದಾರೆ.

ಶ್ರೀ ಕಾ. ಸ. ಧರಣೇಂದ್ರಯ್ಯನವರು ವಿದ್ವಾಂಸರೂ, ಪ್ರಸಿದ್ಧ ಭಾಷಣಕಾರರೂ ಉತ್ಸಾಹಿಗಳೂ ಸಂಧಾನ ಚತುರರೂ ಆಗಿದ್ದರು. ಅವರು ವರ್ಗಪಟ್ಟಿರುವುದರಿಂದ ಪರಿಷತ್ತಿಗೆ ನಷ್ಟವುಂಟಾಗಿದೆ.

---

## ಸಣ್ಣ ಕತೆಗಳ ಬರಹಗಾರರ ಮತ್ತು ಕಾದಂಬರೀಕಾರರ ಸಮ್ಮೇಳನಗಳು.

ಇದೇ ಫೆಬ್ರವರಿ ತಿಂಗಳ ೨ನೆಯ ಮತ್ತು ೩ನೆಯ ತಾರೀಕು ಶನಿವಾರ ಮತ್ತು ಭಾನುವಾರಗಳಂದು ಬೆಂಗಳೂರಿನ ಸಾಹಿತಿಗಳ ಸಂಘ, ಕನ್ನಡ ಸಣ್ಣ ಕತೆಗಾರರ ಮತ್ತು ಕಾದಂಬರೀಕಾರರ ಸಮ್ಮೇಳನಗಳನ್ನು ಶ್ರೀ ಕೃಷ್ಣರಾಜ ಪರಿಷನ್ಮಂದಿರದ ಸಭಾಂಗಣದಲ್ಲಿ ವಿಜೃಂಭಣೆಯಿಂದ ನಡೆಸಿತು. ೨ನೆಯ ತಾರೀಕು, ಶನಿವಾರ ಸಣ್ಣ ಕತೆಗಳ ಬರಹಗಾರರ ಸಮ್ಮೇಳನವು, ಸಣ್ಣ ಕತೆಗಾರರೂ 'ಜಯಂತಿ' ಮಾಸಪತ್ರಿಕೆಯ ಸಂಪಾದಕರೂ ಆದ ಕವಿಭೂಷಣ ಶ್ರೀ ಬೆಟಗೇರಿ ಕೃಷ್ಣಶರ್ಮ ಅವರ ಅಧ್ಯಕ್ಷತೆಯಲ್ಲಿಯೂ, ೩ನೆಯ ತಾರೀಕು ಭಾನುವಾರ ಕಾದಂಬರೀಕಾರರ ಸಮ್ಮೇಳನವು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಬಹುಮುಖವಾದ ಸೇವೆಯನ್ನು ಮಾಡಿರುವವರೂ, ಪ್ರಸಿದ್ಧ ಕಾದಂಬರೀಕಾರರೂ ಆದ ಶ್ರೀ ದೇವುಡು ನರಸಿಂಹಶಾಸ್ತ್ರೀ, ಎಂ. ಎ. ಅವರ ಅಧ್ಯಕ್ಷತೆಯಲ್ಲಿಯೂ ಸಾಂಗವಾಗಿ ನೆರವೇರಿತು. ಉಭಯಸಮ್ಮೇಳನಗಳಿಗೂ ಅನೇಕ ಸಾಹಿತ್ಯಾಭಿಮಾನಿಗಳು ಬಂದಿದ್ದರು. ಬೆಂಗಳೂರಿನವರಿಗೆ ಈ ಎರಡು ದಿನಗಳೂ ಸಾಹಿತ್ಯೋತ್ಸವದ ಆನಂದವನ್ನು ನೀಡಿ ತಣಿಸಿತು.

ಸಾಹಿತಿಗಳ ಸಂಘದ ಅಧ್ಯಕ್ಷರಾದ ರಾಜಸೇವಾಪ್ರಸಕ್ತ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಸ್ವಾಗತ ಭಾಷಣ ಮಾಡುತ್ತ "ಕನ್ನಡ ನಾಡು ಒಂದಾಗಬೇಕು, ಕನ್ನಡ ಜನ ಒಂದಾಗಿ ಕನ್ನಡ ಸಾಹಿತ್ಯದ ಪುರೋಭಿವೃದ್ಧಿಗೆ ದುಡಿಯಬೇಕು. ಹೀಗಾದ ಹೊರತು ಕನ್ನಡಿಗರು ಮಹತ್ವದ ಕಾರ್ಯಗಳನ್ನು ಸಾಧಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ನಮ್ಮ ಕೇಂದ್ರ ಸರ್ಕಾರದವರು ಕನ್ನಡಿಗರ ಆಶೋತ್ತರಗಳನ್ನು ರೂಢಿಸಿಕೊಳ್ಳಲು ಕನ್ನಡ ಪ್ರಾಂತವನ್ನು ಕ್ಷಿಪ್ರದಲ್ಲಿಯೇ ಮಾಡಿಕೊಡಬೇಕು. ಅದಕ್ಕಾಗಿ ಲೋಕಸಭೆಯಲ್ಲಿರುವ ನಮ್ಮ ಪ್ರತಿನಿಧಿಗಳು ಪ್ರಯತ್ನಿಸಬೇಕು"; ಎಂದು ಹೇಳಿದರು. ಕನ್ನಡನಾಡು ಒಂದಾಗಿ ಕನ್ನಡಿಗರೆಲ್ಲ ನಾಡು ನುಡಿಗಳ ಸೇವೆಯಲ್ಲಿ ನಿಷ್ಠೆಯಿಂದ ದುಡಿಯುವ ಕಾಲ ಬೇಗನೆ ಬರಲೆಂದು ಹಾರೈಸುತ್ತೇವೆ.

ಸಣ್ಣ ಕತೆಗಳ ಬರಹಗಾರರ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದ ಶ್ರೀ ಬೆಟಗೇರಿಯವರು ತಮ್ಮ ಪ್ರತಿಭಾಪೂರ್ಣ ಅಧ್ಯಕ್ಷ ಭಾಷಣದಲ್ಲಿ, ಇಂದು ಸಾಹಿತಿಗಳೆಲ್ಲ ತೀವ್ರವಾಗಿ ಪರ್ಯಾಲೋಚಿಸಬೇಕಾದ ಹಲವು ಮುಖ್ಯ ಸಂಗತಿಗಳನ್ನು ತಿಳಿಸಿದರು. ಹೊರಗಿನ ಸಾಹಿತ್ಯದ ವ್ಯಾಮೋಹದಿಂದ ಪ್ರೇರಿತರಾಗಿ ಆ ರೀತಿ ನೀತಿಗಳಗನುಗುಣವಾಗಿ ಕನ್ನಡದಲ್ಲಿ ಸಾಹಿತ್ಯ ನಿರ್ಮಾಣವಾಗುತ್ತಿರುವುದು, ಲೇಖಕರಿಗೆ ಆರ್ಥಿಕ ನೆರವು, ಈಗಿನ ಲೇಖಕರ ದುಃಸ್ಥಿತಿ, ಅಕ್ಷರಸ್ಥರ ಔದಾಸೀನ್ಯ, ಜನರ ಅಭಿರುಚಿ ಮೊದಲಾದ ವಿಷಯಗಳೆನ್ನೆತ್ತಿ ಶ್ರೀಯುತರು ಮಾಡಿದ ಭಾಷಣ ಯುಕ್ತಿ ಯುಕ್ತವಾಗಿಯೂ ಸಾಹಿತಿಗಳಿಗೆ

ಉತ್ಸಾಹ ಪ್ರೋತ್ಸಾಹಗಳನ್ನು ನೀಡುವುದಾಗಿಯೂ ಇದ್ದಿತು. ಸಾಮಾನ್ಯ ಜನಸಮುದಾಯದ ಆರ್ಥಿಕ ಸ್ಥಿತಿ ಹಸನಾಗಿ ಅನ್ನ ಬಟ್ಟೆಗಳ ಅಭಾವ ತೊಲಗಿ ಸುಭಿಕ್ಷ ಬಂದು ಶಾಂತಿ ಮೂಡಿದರೆ ಇಂದಿನ ಸ್ವಾತಂತ್ರ್ಯ ಯುಗದಲ್ಲಿ ಸಮುಚಿತ ಸಾಹಿತ್ಯ ನಿರ್ಮಾಣವನ್ನು ನಮ್ಮ ಸಾಹಿತಿಗಳಿಂದ ಜನತೆಯೆ ಮಾಡಿಸುತ್ತದೆ. ಆ ಸುವರ್ಣ ಯುಗವೂ ಅನತಿ ಕಾಲದಲ್ಲಿಯೇ ಬರಲೆಂದು ಹಾರೈಸೋಣ.

ಕಾದಂಬರೀಕಾರರ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದ್ದ ಶ್ರೀ ದೇವುಡು ಅವರು ತಾವು ಯಾವ ದೃಷ್ಟಿಯಿಂದ ಕಾದಂಬರಿಗಳನ್ನು ರಚಿಸಿದರೆಂಬ ವಿಷಯವನ್ನು ಸಮಗ್ರವಾಗಿ ನಿರೂಪಿಸಿ, ಕಾದಂಬರಿಗಳು ಕೇವಲ ಇತರ ಭಾಷಾ ಕಾದಂಬರಿಗಳ ಅನುಕರಣ ಮಾತ್ರದಿಂದ ಪ್ರೇರಿತವಾಗಿರದೆ, ವಸ್ತು, ರಚನಾರೀತಿ ಮತ್ತು ಸಂಸ್ಕೃತಿಗಳ ದೃಷ್ಟಿಯಿಂದ ಕನ್ನಡ ನಾಡಿನ ಚಾರಿತ್ರಕ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಮತ್ತು ಕಲಾತ್ಮಕ ವಿಷಯ ವೈಶಿಷ್ಟ್ಯವನ್ನು ಸಂಪೂರ್ಣವಾಗಿ ಹುದುಗಿಸಿಕೊಂಡು ಕನ್ನಡಿಗರು ತಮ್ಮತನವನ್ನು ಬೆಳೆಸಿ ಹಿರಿಮೆಯನ್ನು ಗಳಿಸಿಕೊಳ್ಳುವುದಕ್ಕೂ, ತಮ್ಮ ನಾಡಿನ ಅಭ್ಯುದಯಕ್ಕಾಗಿ ಶ್ರಮಿಸುವುದಕ್ಕೂ ಪ್ರೇರಕವಾಗಿರಬೇಕೆಂದು ಸ್ವಾರಸ್ಯವಾಗಿ ಹೇಳಿದರು.

ಈ ಉಭಯ ಸಮ್ಮೇಳನಗಳಲ್ಲಿ ಸಣ್ಣ ಕತೆಗಳ ವಿಷಯದಲ್ಲಿಯೂ, ಕಾದಂಬರಿಗಳ ವಿಷಯದಲ್ಲಿಯೂ ವಿಮರ್ಶಾ ಭಾಷಣಗಳೂ, ಕಾವ್ಯಗಾಯನವೂ ಜನರ ಮೆಚ್ಚಿಗೆಯನ್ನು ಪಡೆದುವು.

ಈ ಉಭಯ ಸಮ್ಮೇಳನಗಳ ಅಂಗವಾಗಿ ನಡೆದ ವಿಚಾರ ವಿನಿಮಯ ಗೋಷ್ಠಿಯಲ್ಲಿ ಸೇರಿದ್ದ ಲೇಖಕ ಲೇಖಕಿಯರು, ನಾಡಿನ ಸಾಹಿತಿಗಳು ಅವಶ್ಯವೂ ಮನದಂದುಕೊಳ್ಳಬೇಕಾದ ಮೂರು ನಾಲ್ಕು ವಿಷಯಗಳನ್ನು ಚರ್ಚಿಸಿ ನಿರ್ಣಯ ಮಾಡಿದರು. ಇವುಗಳಲ್ಲಿ "ಕಾಮೋದ್ದೀಪಕ ಸಾಹಿತ್ಯ ರಚನೆಗೆ ವಿರೋಧ" ಒಂದು. ಎರಡನೆಯದು "ಸಾಹಿತಿಗಳಿಗೆ ಸಹಾಯ ಮಾಡಲು ಒಂದು ನಿಧಿಯನ್ನು ರಚಿಸುವುದು." ಈ ಎರಡು ನಿರ್ಣಯಗಳು ಮಹಾರ್ಥಗರ್ಭಿತವಾದವುಗಳು.

ನಮ್ಮ ಬರಹಗಾರರು ತಮ್ಮ ನಿರ್ಮಿತಿಗಳಲ್ಲಿ ಭಾರತೀಯ ನೈತಿಕ ಮತ್ತು ಸಾಂಸ್ಕೃತಿಕ ಮಟ್ಟಕ್ಕೆ ಊನಬಾರದಂತಹ ರಚನಾ ಪ್ರಣಾಳಿಕೆಯನ್ನು ನಿರ್ವಹಿಸಿ ಸಾಹಿತ್ಯದ ಮಟ್ಟವನ್ನು ಹೆಚ್ಚಿಸಿ ಕೀರ್ತಿಗಳಿಸಲು ಈ ಮೊದಲ ನಿರ್ಣಯ ಅತ್ಯಂತ ಪ್ರಚೋದಕವಾಗಿದೆ. ಇದರಿಂದ ಇನ್ನುಮುಂದೆಯಾದರೂ ಈ ಕಾಮೋದ್ದೀಪಕ ವಿಷಯ ನಿರೂಪಣ ಸಣ್ಣ ಕತೆಗಳು ಮತ್ತು ಕಾದಂಬರಿಗಳಲ್ಲಿ ತಲೆದೋರದೆ ಯುವಕಪ್ರಪಂಚದ ಮನಸ್ಸನ್ನು ಕದಡದೆ ಇರಲೆಂದು ಹಾರೈಸುತ್ತೇವೆ.

ಬೆಂಗಳೂರಿನ ಸಾಹಿತಿಗಳ ಸಂಘದವರು ಈ ಸಮ್ಮೇಳನಗಳನ್ನು ನಡಸಿ ಸಾಹಿತಿಗಳಿಗೂ, ಸಾಹಿತ್ಯಕ್ಕೂ ಉತ್ತಮ ಸೇವೆ ಸಲ್ಲಿಸಿದ್ದಾರೆ. ಅದಕ್ಕಾಗಿ ಅವರಿಗೆ ಹೃತ್ಪೂರ್ವಕವಾದ ಧನ್ಯವಾದಗಳನ್ನರ್ಪಿಸುತ್ತೇವೆ.

---

## ಕಂಬನಿ

ಕನ್ನಡ ಸಾಹಿತ್ಯ ಸಂಸ್ಕೃತಿಗಳಲ್ಲಿ ತೀವ್ರಾಸಕ್ತಿಯುಳ್ಳವರಾಗಿ ಬಹುಮುಖವಾದ ಸೇವೆ ಸಲ್ಲಿಸುತ್ತಿದ್ದವರೂ, ಕನ್ನಡ ಸಾಹಿತ್ಯ ಪರಿಷತ್ತಿನ ಆಜೀವ ಸದಸ್ಯರೂ, ಮತ್ತು ಕಾರ್ಯಸಮಿತಿಯ ಸದಸ್ಯರಾಗಿದ್ದು ಪರಿಷತ್ತಿಗೆ ತುಂಬ ನೆರವಾಗಿದ್ದವರೂ, ಸೌಜನ್ಯಶೀಲರೂ ಬೆಳಗಾಂ ಜಿಲ್ಲಾ ಲೋಕಲ್ ಬೋರ್ಡಿನ ಮುಖ್ಯ ಅಧಿಕಾರಿಗಳೂ ಆಗಿದ್ದ ಶ್ರೀ ಎಂ. ಪಿ. ವಾಲಿಯವರು ಜನವರಿ ೨೭ನೆಯ ತಾರೀಕು ಭಾನುವಾರ ರಾತ್ರಿ ೧೧ ಘಂಟೆಯ ವೇಳೆಯಲ್ಲಿ ಹೃದಯಸ್ತಂಭನದಿಂದ ನಿಧನರಾದರೆಂದು ತಿಳಿಸಲು ವಿಷಾದವಾಗಿದೆ. ಶ್ರೀ ವಾಲಿಯವರ ಆಕಸ್ಮಿಕ ನಿಧನದಿಂದ ನೊಂದಿರುವ ಅವರ ಕುಟುಂಬದವರಿಗೂ ಅವರ ಮಿತ್ರರಿಗೂ ಉಂಟಾಗಿರುವ ಅಪಾರ ಶೋಕದಲ್ಲಿ ಪರಿಷತ್ತು ಸಹ ಭಾಗಿಯಾಗಿ ಶ್ರೀಯುತರಿಗೆ ಪರಮಾತ್ಮನು ಸದ್ಗತಿಯನ್ನು ನೀಡಲೆಂದು ಪ್ರಾರ್ಥಿಸುತ್ತದೆ.

## ಸುಪ್ರಸಿದ್ಧ ವೈಣಿಕರ ನಿಧನ

ಭರತಖಂಡದಲ್ಲೆಲ್ಲ ಸುಪ್ರಸಿದ್ಧ ವೈಣಿಕರೆಂದು ಖ್ಯಾತಿಗಳಿಸಿದ್ದವರೂ, ಮೈಸೂರು ಮಹಾರಾಜರವರ ಆಸ್ಥಾನಕ್ಕೆ ಭೂಷಣಪ್ರಾಯರಾಗಿದ್ದವರೂ ಹಿರಿಯ ಸಂಗೀತಗಾರರಲ್ಲೊಬ್ಬರೂ ಆಗಿದ್ದ ಆಸ್ಥಾನ ವಿದ್ವಾನ್, ವೈಣಿಕ ಪ್ರವೀಣ ಶ್ರೀ ವೆಂಕಟಗಿರಿಯಪ್ಪನವರು ತಮ್ಮ ಅರುವತ್ತುನಾಲ್ಕನೆಯ ವಯಸ್ಸಿನಲ್ಲಿ ಮೈಸೂರಿನ ಗೀತಾ ರಸ್ತೆಯಲ್ಲಿರುವ ತಮ್ಮ ಸ್ವಗೃಹದಲ್ಲಿ ಸ್ವರ್ಗಸ್ಥರಾದರೆಂದು ತಿಳಿಸಲು ತುಂಬ ವಿಷಾದವಾಗುವುದು. ಶ್ರೀಯುತರ ನಿಧನದಿಂದ ಸಂಗೀತ ಪ್ರಪಂಚಕ್ಕೆ ದೊಡ್ಡ ನಷ್ಟವಾಗಿದೆ. ಶ್ರೀಯುತರು ಸ್ವರ್ಗಸ್ಥರಾದರೂ ಅವರ ಕೀರ್ತಿ ಚಿರಸ್ಥಾಯಿಯಾಗಿ ಬೆಳಗುತ್ತಿರುತ್ತದೆ. ಪರಮಾತ್ಮನು ಅವರಿಗೆ ಸದ್ಗತಿಯನ್ನು ಕರುಣಿಸಲಿ, ಎಂದು ಪ್ರಾರ್ಥಿಸುತ್ತೇವೆ

ಶ್ರೀಕಂಠಯ್ಯ ಅಚ್ಚುಕೂಟ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೨

Reg. No. M. 3975

Licenced to Post without Prepayment. License No.6



# ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ, ಬೆಂಗಳೂರು ೨

## ಪರಿಷತ್ತಿನ ಪ್ರಕಟನೆಗಳು

| | | | | |
|---|---|---|---|---|
| ೧. | ಕನ್ನಡ ಬಾವುಟ (ಮೂರನೆಯ ಮುದ್ರಣ) .... | ೨ | ೦ | ೦ |
| ೨. | ಪಂಪ ಭಾರತದ ಕಥೆ (ವಚನ) .... | ೧ | ೪ | ೦ |
| ೩. | ಪಂಪ ಭಾರತದ ನಿಘಂಟು .... .... | ೧ | ೦ | ೦ |
| ೪. | ಪಂಪ ರಾಮಾಯಣದ ಕಥೆ (ವಚನ) .... | ೦ | ೧೨ | ೦ |
| ೫. | *ಪಂಪ ರಾಮಾಯಣ (೪ನೆಯ ಆಶ್ವಾಸ) .... | ೦ | ೮ | ೦ |
| ೬. | ಪಂಪ ರಾಮಾಯಣದ ನಿಘಂಟು .... .... | ೦ | ೮ | ೦ |
| ೭. | *ತೊರವೆಯ ರಾಮಾಯಣ (ಬಾಲಕಾಂಡ ಸಂಧಿ ೧೩–೧೬) .... | ೦ | ೩ | ೯ |
| ೮. | ಸೀತಾಪರಿತ್ಯಾಗ (ಜೈಮಿನಿ ಭಾರತದಿಂದ) .... | ೦ | ೧೨ | ೬ |
| ೯. | ಜೇಮ್ಸ್ ಏಬ್ರಾಮ್ ಗಾರ್‌ಫೀಲ್ಡನ ಚರಿತ್ರೆ : ಕ್ಯಾಲಿಕೊ ಪ್ರತಿ | ೧ | ೮ | ೦ |
| | ಸಾದಾ ಪ್ರತಿ | ೦ | ೧೫ | ೦ |
| ೧೦. | ಜ್ಯೋತಿರ್ವಿನೋದಿನಿ .... .... | ೨ | ೦ | ೦ |
| ೧೧. | ಹರಿದಾಸರ ಕೃತಿಗಳು (ಸ್ವರಪ್ರಸ್ತಾರ ಸಹಿತ) .... | ೦ | ೧೫ | ೦ |
| ೧೨. | ಹೂವಾಲೆ .... .... | ೦ | ೧೦ | ೦ |
| ೧೩. | ಕನ್ನಡ ನಾಡಿನ ಚರಿತ್ರೆ: ಭಾಗ ೧ (೨ನೆಯ ಮುದ್ರಣ) .... | ೧ | ೮ | ೦ |
| | ಭಾಗ ೨ .... .... | ೧ | ೧೪ | ೦ |
| | ಭಾಗ ೩ .... .... | ೧ | ೦ | ೦ |
| ೧೪. | ವಡ್ಡಾರಾಧನೆ .... .... .... | ೨ | ೮ | ೦ |
| ೧೫. | ಜೈಮಿನಿ ಭಾರತದ ಕನ್ನಡ ಗದ್ಯಾನುವಾದ (ಅಶ್ವಮೇಧಿಕ ಪರ್ವ) | ೨ | ೪ | ೦ |
| ೧೬. | ಹರಿಶ್ಚಂದ್ರನ ರಾಜ್ಯಸಮರ್ಪಣ .... .... | ೦ | ೪ | ೦ |
| ೧೭. | ಸರ್ವೋದಯ .... .... .... | ೦ | ೫ | ೦ |
| ೧೮. | ಸೋಮೇಶ್ವರ ಶತಕ .... .... .... | ೧ | ೪ | ೦ |
| ೧೯. | ಸಂಕಲನ .... .... .... | ೦ | ೧೦ | ೦ |
| ೨೦. | ಕುಮಾರವ್ಯಾಸ ದರ್ಶನ .... .... .... | ೦ | ೨ | ೦ |
| ೨೧. | ಕನ್ನಡದಲ್ಲಿ ಸುಧಾರಣೆಗಳು .... .... | ೦ | ೬ | ೦ |
| ೨೨. | ಅರುಂಧತಿ .... .... .... | ೦ | ೪ | ೦ |
| ೨೩. | ಚಂದ್ರಹಾಸೋಪಾಖ್ಯಾನ .... .... | ೦ | ೧೨ | ೦ |

* ಪ್ರತಿಗಳು ಮುಗಿದಿವೆ.

ಪುಸ್ತಕಗಳನ್ನು ಕೊಳ್ಳುವವರಿಗೆ ಕೆಳಗೆ ಕಂಡಂತೆ ರಿಯಾಯಿತಿ (ಕಮಿಷನ್) ಕೊಡಲಾಗುವುದು.

ರೂ. ೧೫/ ಮತ್ತು ಮೇಲ್ಪಟ್ಟು ಬೆಲೆಯ ಪುಸ್ತಕಗಳನ್ನು ಕೊಳ್ಳುವವರಿಗೆ ಸೇ. ೧೦ ರಂತೆ,
ರೂ. ೫೦/ ಮತ್ತು ಮೇಲ್ಪಟ್ಟು ಕೊಳ್ಳುವವರಿಗೆ ಸೇ. ೧೫ ರಂತೆ,
ರೂ. ೧೦೦/ ಮತ್ತು ಮೇಲ್ಪಟ್ಟು ಕೊಳ್ಳುವವರಿಗೆ ಸೇ. ೨೦ ರಂತೆ.

ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಸಿಟಿ. ೧೯೫೨–೧೨೦೦